CPMG / KA / BG-GPO/13/2003-2005



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೦ | ಬೆಂಗಳೂರು, ಗುರುವಾರ, ಮೇ ೧೯, ೨೦೦೫ (ವೈಶಾಖ ೨೯, ಶಕ ವರ್ಷ ೧೯೨೭) | ಸಂಚಿಕೆ ೨೦ |
|---|---|---|

## ಭಾಗ - ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

### ಸಹಕಾರ ಸಂಘಗಳ ಸಹಾಯಕ ನಿಬಂಧಕರು ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ

**ಫಾರಂ ನಂ.11**

**ಸಹಕಾರ ಸಂಘಗಳ ನಿಯಮಗಳು 1960ರ ನಿಯಮ 38ನೇ ಉಪ ನಿಯಮ (7)ರಂತೆ ಸ್ಥಿರಸ್ವತ್ತುಗಳನ್ನು ಕೊಂಡದಕ್ಕೆ ಪ್ರಕಟಣೆ**

ಶಿವಮೊಗ್ಗ ಜಿಲ್ಲಾ ಶಿವಮೊಗ್ಗ ತಾಲ್ಲೂಕು ಗುರುಪುರ, ಶಿವಮೊಗ್ಗ ವಾಸಿಯಾದ ಶ್ರೀ ಸಂಜೀವಶೆಟ್ಟಿ ಬಿನ್ ಗೋವಿಂದಶೆಟ್ಟಿ ಇವರು ಈ ಕೆಳಗೆ ತೋರಿಸಿದ ಸ್ಥಿರಸ್ವತ್ತುಗಳನ್ನು ಬಹಿರಂಗ ಹರಾಜಿನಲ್ಲಿ ದಿನಾಂಕ: 30.10.2004 ರಂದು ಕ್ರಯಕ್ಕೆ ಪಡೆದುಕೊಂಡಿದ್ದಾಗಿಯೂ ಮತ್ತು ದರಖಾಸ್ತು ಹಣ ರೂ. 186000-00 (ರೂಪಾಯಿ ಒಂದು ಲಕ್ಷದ ಎಂಬತ್ತಾರು ಸಾವಿರ ಮಾತ್ರ) ಗಳನ್ನು ಸಂಪೂರ್ಣವಾಗಿ ಪಾವತಿ ಮಾಡಿದ್ದಾಗಿಯೂ ಈ ಮೂಲಕ ಎಲ್ಲಾ ಜನರಿಗೆ ಬಹಿರಂಗವಾಗಿ ತಿಳಿಸೋಣವಾಗುತ್ತದೆ. ಆದ ಪ್ರಯುಕ್ತ, ಸದರಿ ಸ್ವತ್ತುಗಳಲ್ಲಿರುವ ಬಾಕಿದಾರರು ಎಲ್ಲಾ ಹಕ್ಕು-ವ- ಪ್ರಯೋಜನಗಳಿಗೆ ಶ್ರೀ ಸಂಜೀವಶೆಟ್ಟಿ ಬಿನ್ ಗೋವಿಂದಶೆಟ್ಟಿ ಇವರು ಉತ್ತರಾಧಿಕಾರಿಗಳಾಗಿದ್ದಾರೆ, ಎಂಬುದಾಗಿ ಈ ಮೂಲಕ ದೃಢ ಪಡಿಸೋಣವಾಗಿರುತ್ತದೆ.

| ಗ್ರಾಮ ಮತ್ತು ತಾಲ್ಲೂಕು | ಸ್ವತ್ತುಗಳ ವಿವರ: ತರಹೆ | ಖಾತೆ ನಂ. | ಸ್ಥಿರಾಸ್ತಿಯ ವಿವರ | | |
|---|---|---|---|---|---|
| | | | ಖಾತೆದಾರರ ಹೆಸರು | ಅಂದಾಜು ವಿಸ್ತೀರ್ಣ | ಆಕಾರ |
| ಗುರುಪುರ ವಾರ್ಡ್ ನಂ.12, ಶಿವಮೊಗ್ಗ | ಆರ್.ಸಿ.ಸಿ.ಮನೆ. | 109:122 ಹೊಸ ನಂ.1776:2040 109 | ಶ್ರೀಮತಿ ವೀಣಾ | 25x75 | - |

**ಷರಾ**

ಸದರಿ ಸ್ವತ್ತನ್ನು ಸಿಟಿ ಕೋಆಪ್ ಬ್ಯಾಂಕ್(ನಿ) ಶಿವಮೊಗ್ಗ ಇವರಿಗೆ ಬರಬೇಕಾದ ಬಾಕಿ ಮೊಬಲಗಿಗಾಗಿ ಬಹಿರಂಗ ಹರಾಜು ಮಾಡಿರುತ್ತದೆ.

ಪಿ.ಆರ್.670

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ.

### ಕಾನೂನು ಇಲಾಖೆ

**ಅಧಿಸೂಚನೆ**

**ಸಂಖ್ಯೆ: ಲಾ 29 ಎಲ್ಎಜಿ 2005, ಬೆಂಗಳೂರು, ದಿನಾಂಕ: 21ನೇ ಮಾರ್ಚ್, 2005**

ಕರ್ನಾಟಕ ಕಾನೂನು ಅಧಿಕಾರಿಗಳು (ನೇಮಕಾತಿ ಮತ್ತು ಸೇವಾ ಷರತ್ತುಗಳು) ನಿಯಮಗಳು 1977ರ 5ರ ಉಪನಿಯಮ (6)ನ್ನು ಚಲಾಯಿಸಿ, ಕರ್ನಾಟಕ ಉಚ್ಚ ನ್ಯಾಯಾಲಯದ ಸರ್ಕಾರಿ ವಕೀಲರಾದ ಶ್ರೀ ಪಾಲಕ್ಷಯ್ಯ ರವರನ್ನು ಸದರಿ ನಿಯಮಗಳ ನಿಯಮ 5ರ ಉಪನಿಯಮ 6ರನ್ವಯ ದಿನಾಂಕ: 21.03.2005ರಿಂದ ಜಾರಿಗೆ ಬರುವಂತೆ ಕರ್ತವ್ಯದಿಂದ ವಿಮುಕ್ತಿಗೊಳಿಸಿದೆ.

ಈ ಹುದ್ದೆಯಿಂದ ವಿಮುಕ್ತಿಗೊಳಿಸಲು ಸರ್ಕಾರದಿಂದ ನೀಡಬೇಕಾದ ಒಂದು ತಿಂಗಳಿನ ನೋಟೀಸ್‌ನ ಬದಲಾಗಿ ಒಂದು ತಿಂಗಳಿನ ರಿಟೈನರ್ ಶುಲ್ಕವನ್ನು ಇವರಿಗೆ ನೀಡಲು ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಚಿಕ್ಕಹನುಮಂತಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಾನೂನು ಇಲಾಖೆ (ಆಡಳಿತ-1).

ಪಿ.ಆರ್.672

## ಕಂದಾಯ ಇಲಾಖೆ

## ತಿದ್ದುಪಡಿ ಅಧಿಸೂಚನೆ

### ಸಂಖ್ಯೆ: ಕಂಇ 110 ಬಿಎಂಎಂ 04, ಬೆಂಗಳೂರು, ದಿನಾಂಕ: 17ನೇ ಮಾರ್ಚ್, 2005

ಕಂದಾಯ ಇಲಾಖೆಯ ಶಿರಸ್ತೇದಾರ್: ಉಪ ತಹಸೀಲ್ದಾರ್ ವೃಂದದ ಅಂತಿಮ ಜೇಷ್ಠತಾ ಪಟ್ಟಿಯನ್ನು ಸರ್ಕಾರದ ಅಧಿಸೂಚನೆ ಸಂಖ್ಯೆ: ಕಂಇ 467 ಬಿಎಂಎಂ 2000 (ಭಾಗ) ರಂತೆ ದಿನಾಂಕ: 20.12.03 ರಂದು ಪ್ರಕಟಿಸಲಾಗಿದೆ. ಅಂತಿಮ ಜೇಷ್ಠತಾ ಪಟ್ಟಿ ಪ್ರಕಟಿಸಿದ ಮೇಲೆ ನೌಕರರುಗಳಾದ ಶ್ರೀ ವಿ.ಆರ್. ಕುಲಕರ್ಣಿ, ಆರ್. ಹನುಮರೆಡ್ಡಿ, ಬಿ.ಬಿ. ಯರಝುರಿ, ಯು.ಎನ್.ಚಿದಂಬರ, ಶಿವಮೂರ್ತಿ, ಎಸ್. ಮಹದೇವಪ್ಪ, ಎಸ್. ಜಯರಾಮೇಗೌಡ, ವೈ.ಹೆಚ್. ಮರಿಸಿದ್ದಯ್ಯ, ಇವರುಗಳ ಜೇಷ್ಠತಾ ಪಟ್ಟಿಯಲ್ಲಿ ಕ್ರಮ ಸಂಖ್ಯೆ: ಕ್ರಮವಾಗಿ 4311, 4312, 4100, 4758, 4127, 4548, 4549 ಮತ್ತು 4550ರಲ್ಲಿ ನಿಗದಿಪಡಿಸಲಾದ ಈ ನೌಕರರುಗಳು ಜೇಷ್ಠತಾ ಪಟ್ಟಿಯಲ್ಲಿ ತಮ್ಮ ಹೆಸರು ಹುಟ್ಟಿದ ದಿನಾಂಕ ನೇಮಕಾತಿ ಆದೇಶದ ದಿನಾಂಕ, ನಿಗದಿಪಡಿಸಲಾದ ಜೇಷ್ಠತಾ ಹಾಗೂ ಡಿ.ಆರ್. ಬದಲು ಪಿ.ಆರ್. ಎಂದೂ ಪಿ.ಆರ್. ಇರುವ ಕಡೆ ಡಿ.ಆರ್. ಎಂದೂ ನಮೂದಿಸಿರುವುದು ತಪ್ಪಾಗಿರುತ್ತದೆಂದು ಸರ್ಕಾರಕ್ಕೆ ಮನವಿ ಸಲ್ಲಿಸಿ ಈ ನ್ಯೂನತೆಗಳನ್ನು ಸರಿಪಡಿಸಲು ಕೋರಿರುತ್ತಾರೆ.

ಶ್ರೀ ವಿ.ಆರ್. ಕುಲಕರ್ಣಿ, ಆರ್. ಹನುಮರೆಡ್ಡಿ, ಬಿ.ಬಿ. ಯರಝುರಿ ಅವರಿಗೆ ಸಂಬಂಧಿಸಿದಂತೆ ಮೈಸೂರು ಜಿಲ್ಲಾಧಿಕಾರಿಗಳ ಕೇಂದ್ರ ಸಹಾಯಕರ ಅರೆ ಸರ್ಕಾರಿ ಪತ್ರ ಸಂಖ್ಯೆ: ಇಎಸ್‌ಟಿ (1) ಸಿಆರ್ 448: 2003-04 ದಿನಾಂಕ: 03.01.2004ರಲ್ಲಿ ಸದರಿ ನೌಕರರ ಕೋರಿಕೆಗಳು ದಾಖಲೆಗಳನ್ವಯ ಸರಿ ಇದ್ದು ನಿಯಮಾನುಸಾರ ತಿದ್ದುಪಡಿ ಮಾಡಿ ಜೇಷ್ಠತೆಯನ್ನು ಪುನರ್‌ನಿಗದಿಪಡಿಸಲು ಶಿಫಾರಸ್ಸು ಮಾಡಿರುತ್ತಾರೆ. ಅದೇ ರೀತಿ ಶ್ರೀ ಎಸ್. ಮಹದೇವಪ್ಪ, ಶ್ರೀ ಎಸ್. ಜಯರಾಮೇಗೌಡ, ಶ್ರೀ ವೈ.ಹೆಚ್. ಮರಿಸಿದ್ದಯ್ಯ, ಇವರುಗಳಿಗೆ ಸಂಬಂಧಿಸಿದಂತೆ ಮೈಸೂರು ಜಿಲ್ಲಾಧಿಕಾರಿಗಳ ಕೇಂದ್ರ ಸಹಾಯಕರ ಅರೆ ಸರ್ಕಾರಿ ಪತ್ರ ಸಂಖ್ಯೆ: ಇಎಸ್‌ಟಿ (1) ಸಿಆರ್ 448:2003-04, ದಿನಾಂಕ: 26.05.04ರಲ್ಲಿ ಕೆಎಟಿ ಅರ್ಜಿ ಸಂಖ್ಯೆ: 3894 ರಿಂದ 3896:1992 ದಿನಾಂಕ: 11.11.1991 ರಲ್ಲಿ ನೀಡಿದ ತೀರ್ಪಿನನ್ವಯ ಈಗಾಗಲೇ ಮೈಸೂರು ವಿಭಾಗಾಧಿಕಾರಿಗಳು ಮತ್ತು ಸರ್ಕಾರವು ಪರಿಗಣಿಸಿ ಜೇಷ್ಠತೆಯನ್ನು ನಿಗದಿಪಡಿಸಿದ್ದು, ಅದರಂತೆ ಸದರಿ ನೌಕರರು ಮನವಿಗಳನ್ನು ಪರಿಗಣಿಸಿ ಅಂತಿಮ ಜೇಷ್ಠತಾ ಪಟ್ಟಿಗೆ ತಿದ್ದುಪಡಿ ಮಾಡಲು ಹಾಗೂ ಶ್ರೀ ಯು.ಎನ್. ಚಿದಂಬರ ಮತ್ತು ಶ್ರೀ ಶಿವಮೂರ್ತಿ ಇವರುಗಳಿಗೆ ಸಂಬಂಧಿಸಿದಂತೆ, ಹಾಸನ ಜಿಲ್ಲಾಧಿಕಾರಿಗಳು ಅರೆ ಸರ್ಕಾರಿ ಪತ್ರ ಸಂಖ್ಯೆ: ಸಿಬ್ಬಂದಿ (1) 463:03-04 ದಿನಾಂಕ: 02.01.03 ಮತ್ತು ಅರೆ ಸರ್ಕಾರಿ ಪತ್ರ ಸಂಖ್ಯೆ: 52:04, ದಿನಾಂಕ: 29.05.04ರನ್ವಯ ನೌಕರರ ಕೋರಿಕೆಗಳು ದಾಖಲೆಗಳನ್ವಯ ಸರಿ ಇದ್ದು ಸೂಕ್ತ ತಿದ್ದುಪಡಿ ಮಾಡುವಂತೆ ಜಿಲ್ಲಾಧಿಕಾರಿಗಳು ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಮಾನ್ಯ ಕೆ.ಎ.ಟಿ. ನ್ಯಾಯಾಲಯದಲ್ಲಿ ಈ ಮೇಲ್ಕಂಡ ನೌಕರರುಗಳು ಅಂದರೆ, ಶ್ರೀ ವಿ.ಆರ್. ಕುಲಕರ್ಣಿ, ಆರ್. ಹನುಮರೆಡ್ಡಿ (ಅರ್ಜಿ ಸಂ. 739-740, ದಿನಾಂಕ: 11.02.04) ಬಿ.ಬಿ. ಯರಝುರಿ, (748:04, ದಿನಾಂಕ: 30.01.04) ಇವರುಗಳ ಬಗ್ಗೆ ನ್ಯಾಯಾಲಯವು ಮೈಸೂರು ಜಿಲ್ಲಾಧಿಕಾರಿಯವರ ಕೇಂದ್ರ ಸಹಾಯಕರ ಶಿಫಾರಸ್ಸಿನನ್ವಯ ಕೂಡಲೇ ಕಾನೂನು ಅಡಿಯಲ್ಲಿ ಸೂಕ್ತ ನಿರ್ಧಾರ ತೆಗೆದುಕೊಳ್ಳುವಂತೆ ಆದೇಶಿಸಿದೆ. ಹಾಗೂ ಯು.ಆರ್. ಚಿದಂಬರ ಮತ್ತು ಶ್ರೀ ಶಿವಮೂರ್ತಿ (788-789:04, ದಿನಾಂಕ: 20.05.04) ಇವರುಗಳಿಗೆ ಸಂಬಂಧಿಸಿದಂತೆ ನ್ಯಾಯಾಲಯವು ಅವರ ಮನವಿಯನ್ನು ಪರಿಶೀಲಿಸಿ ಅರ್ಜಿದಾರರ ಕೋರಿಕೆಗಳಲ್ಲಿ ಸತ್ಯಾಂಶವಿದ್ದಲ್ಲಿ ಜೇಷ್ಠತಾ ಪಟ್ಟಿಗೆ ಸೂಕ್ತ ತಿದ್ದುಪಡಿ ಮಾಡುವಂತೆ ಆದೇಶಿಸಿದೆ.

ಈ ನೌಕರರುಗಳ ಮನವಿಗಳನ್ನು ಮೇಲ್ಕಂಡ ಜಿಲ್ಲಾಧಿಕಾರಿಗಳವರ ಶಿಫಾರಸ್ಸು ಹಾಗೂ ಮಾನ್ಯ ಕೆಎಟಿ ನ್ಯಾಯಾಲಯದ ನಿರ್ದೇಶನಗಳನ್ನು ಪರಿಗಣಿಸಿ ಈ ಕೆಳಕಂಡ ನೌಕರರುಗಳ ಜೇಷ್ಠತೆಯನ್ನು ದಾಖಲೆಗಳನ್ವಯ ಅವರುಗಳಿಗೆ ನಿಗದಿಪಡಿಸಬೇಕಾದ ಜೇಷ್ಠತೆ ಮತ್ತು ನ್ಯೂನತೆಗಳನ್ನು ಸರಿಪಡಿಸಿ, ವೃಂದ ಮತ್ತು ನೇಮಕಾತಿ ನಿಯಮಗಳನ್ವಯ ಹಾಗೂ ಶ್ರೀ ರಾಮನಾಥ ಮತ್ತು ಇತರರು ಸಲ್ಲಿಸಿದ್ದ ಕೆಎಟಿ ಅರ್ಜಿ ಸಂಖ್ಯೆ: 942 ರಿಂದ 949:2000 ರಲ್ಲಿ ನೀಡಿದ ತೀರ್ಪಿನನ್ವಯ ಶಿರಸ್ತೆದಾರರಾಗಲು 5 ವರ್ಷ ಪ್ರ.ದ.ಸ. ಹುದ್ದೆಯಲ್ಲಿ ಕೆಲಸ ಮಾಡಿ ನಂತರವೇ ಅರ್ಹರಾಗುತ್ತಾರೆಂದು ಆದೇಶಿಸಿರುವ ಹಿನ್ನಲೆಯಲ್ಲಿ ಇವರ ಅರ್ಹತಾ ದಿನಾಂಕವನ್ನು 5 ವರ್ಷಗಳ ನಂತರವೇ ನಿಗದಿಗೊಳಿಸಿ ಅವರ ಹೆಸರಿನ ಮುಂದೆ ಸೇರ್ಪಡೆ ಮಾಡಿ ಈ ಕೆಳಕಂಡಂತೆ ನಮೂದಿಸಿ ಆದೇಶಿಸಲಾಗಿದೆ.

| ಕ್ರ. ಸಂ. | ರಾಜ್ಯಮಟ್ಟದ ಜೇಷ್ಠತಾ ಪಟ್ಟಿಯ ಕ್ರ.ಸಂಖ್ಯೆ | ನೌಕರರ ಹೆಸರು | ಡಿಆರ್ ಪಿಆರ್ | ವಿಭಾಗ | ಹುಟ್ಟಿದ ದಿನಾಂಕ | ನೇಮಕಾತಿ ಹೊಂದಿದ ದಿನಾಂಕ | ಅರ್ಹತಾ ದಿನಾಂಕ | ಷರಾ |
|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 |
| 1. | 3626-ಎ | ವಿ.ಆರ್. ಕುಲಕರ್ಣಿ | ಡಿಆರ್ | ಮೈಸೂರು | 18.11.51 | 19.02.75 | 14.08.81 | ಶಿರಸ್ತೆದಾರ್ |
| 2. | 3626-ಬಿ | ಆರ್. ಹನುಮರೆಡ್ಡಿ | ಡಿಆರ್ | ಮೈಸೂರು | 28.01.52 | 19.02.75 | 14.08.81 | ” |
| 3. | 3644-ಎ | ಬಿ.ಬಿ. ಯರಝುರಿ | ಡಿಆರ್ | ಮೈಸೂರು | 01.05.49 | 06.08.75 | 03.09.81 | ” |
| 4. | 3592-ಎ | ಯು.ಎನ್. ಚಿದಂಬರ | ಡಿಆರ್ | ಮೈಸೂರು | 27.02.51 | 06.07.73 | 14.08.81 | ” |
| 5. | 3741-ಎ | ಶಿವಮೂರ್ತಿ | ಡಿಆರ್ ನಿಯಮ 6ರಡಿ | ಮೈಸೂರು | 05.07.48 | 30.06.73 | 21.04.81 | ” |
| 6. | 3823-ಎ | ಎಸ್. ಮಹದೇವಪ್ಪ | ಡಿಆರ್ | ಮೈಸೂರು | 10.10.52 | 23.08.77 | 24.08.82 | ” |
| 7. | 3823-ಬಿ | ಎಸ್. ಜಯರಾಮೇಗೌಡ | ಡಿಆರ್ | ಮೈಸೂರು | 02.03.52 | 23.08.77 | 24.08.82 | ” |
| 8. | 3823-ಸಿ | ವೈ.ಹೆಚ್. ಮರಿಸಿದ್ದಯ್ಯ | ಡಿಆರ್ | ಮೈಸೂರು | 08.04.51 | 23.08.77 | 24.08.82 | ” |

**ಷರಾ:** ಮೇಲ್ಕಂಡ ನೌಕರರ ಹೆಸರುಗಳನ್ನು ದಿನಾಂಕ: 20.12.2003 ರಂದು ಪ್ರಕಟಿಸಲಾಗಿರುವ ರಾಜ್ಯಮಟ್ಟದ ಶಿರಸ್ತೆದಾರರ ಜೇಷ್ಠತಾ ಪಟ್ಟಿಯಲ್ಲಿ ಕ್ರಮ ಸಂಖ್ಯೆ: 4311, 4312, 4100, 4758, 4127, 4548, 4549 ಮತ್ತು 4550 ನ್ನು ಕೈಬಿಡಲಾಗಿದೆ.

**ಮಾಜ ಅಹಮದ್ ಶರೀಫ್**

ಪಿ.ಆರ್.673

ಸರ್ಕಾರದ ಉಪ ಕಾರ್ಯದರ್ಶಿ,
ಕಂದಾಯ ಇಲಾಖೆ (ಸೇವೆಗಳು).

**ಒಳಾಡಳಿತ ಇಲಾಖೆ**

**ಅಧಿಸೂಚನೆ**

**ಸಂಖ್ಯೆ: ಒಇ 144 ಪಿಪಿಇ 2005, ಬೆಂಗಳೂರು, ದಿನಾಂಕ: 29ನೇ ಮಾರ್ಚ್, 2005**

ಕೋಲಾರದ 3ನೇ ತ್ವರಿತ ವಿಲೇವಾರಿ ನ್ಯಾಯಾಲಯದಲ್ಲಿ ದಾಖಲಾಗಿರುವ ಎಸ್.ಸಿ. ಸಂಖ್ಯೆ: 94:2001ರ ಕೌಂಟರ್ ಪ್ರಕರಣವಾದ ಎಸ್.ಸಿ. ಸಂಖ್ಯೆ: 275:2002ರ ಪ್ರಕರಣದಲ್ಲಿ ಸರ್ಕಾರದ ಪರವಾಗಿ ಹಾಜರಾಗಲು ಮತ್ತು ಪ್ರಕರಣವನ್ನು ನಡೆಸಲು ಕೋಲಾರದ 2ನೇ ತ್ವರಿತ ವಿಲೇವಾರಿ ನ್ಯಾಯಾಲಯದ ವಿಶೇಷ ಸರ್ಕಾರಿ ಅಭಿಯೋಜಕರನ್ನು ನೇಮಿಸಲಾಗಿದೆ. ಸರ್ಕಾರಿ ಆದೇಶ ಸಂಖ್ಯೆ: ಲಾ 463 ಎಲ್‌ಸಿಎಮ್ 2002, ದಿನಾಂಕ: 25.01.2003ರಲ್ಲಿ ಸದರಿ ನ್ಯಾಯಾಲಯದ ಕೌಂಟರ್ ಪ್ರಕರಣ ಸಂಖ್ಯೆ: ಎಸ್.ಸಿ. 275:2002ಅನ್ನು ನಡೆಸಲು ಸರ್ಕಾರಿ ಅಭಿಯೋಜಕರು, ಪ್ರಧಾನ ಸತ್ರ ನ್ಯಾಯಾಲಯ, ಕೋಲಾರ ಇವರಿಗೆ ನೀಡಲಾಗಿದ್ದ ಪ್ರಾಧಿಕಾರವನ್ನು ರದ್ದುಪಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ,
(ಕಾ. ಮತ್ತು ಸು. ಮತ್ತು ಕಾಫಿಪೋಸ್ ಮತ್ತು ಅಭಿಯೋಗ).

ಪಿ.ಆರ್.674

**COMMERCIAL TAXES DEPARTMENT**
**OFFICE OF THE COMMERCIAL TAX OFFICER, 29TH CIRCLE, BANGALORE**
**NOTIFICATION**
**No.453/04-05, Bangalore, Dated 6th December, 2004**

It is hereby notified to the notice of general public that the statutory forms/ declaration forms issued to the following dealers as detailed noted against each dealers are treated as invalid due to non-availability of the concerned assessee after obtaining the registration in this office. any persons attempt to use the following statutory/ declaration forms are themselves responsible for it further consequences.

| Sl. No. | Name & Address of the assessee with RC. No. | Date of issue | Sl.No. of the declaration forms | Total No. of Forms issued |
|---|---|---|---|---|
| 1 | 2 | 3 | 4 | 5 |
| 1. | M/s. R.C. Sales Corporation No.671, 2nd Block, 2nd Stage Basaveshwaranagar, Bangalore-79.<br>RC. No. KST. 77322290/77372293 | 04.02.1998 | C' FOMRS From Sl.No. 574687 to 574691 | 5 Nos. of C FORMS |

COMMERCIAL TAX OFFICER,
29TH CIRCLE, BANGALORE-20.

PR-675

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ,**
**ಮಂಗಳೂರುರವರ ನ್ಯಾಯಾಲಯದಲ್ಲಿ**

**ನಂ.:ಎಸ್‌ಡಿಕೆ:3:ಡಿಟಿಸಿಆರ್:2004-05, ದಿನಾಂಕ: 7ನೇ ಏಪ್ರಿಲ್, 2005**

**ಉಪಸ್ಥಿತರು:** ಶಾಕೀರ್ ಅಹ್ಮದ್,
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಫಿರ್ಯಾದುದಾರರು**
ಅಬಕಾರಿ ಉಪ ನಿರೀಕ್ಷಕರು,
ನಂ.4 ಇಐಬಿ. ಮಂಗಳೂರು ವಿಭಾಗ,
ಮಂಗಳೂರು.

**ವಿರುದ್ಧ**

**ಆರೋಪಿಗಳು**
1. ಹರೀಶ್ ನಾಯಕ್, ಬಿನ್ ಡೀಕಯ್ಯ ನಾಯಕ್,
ಕಂಕನಾಡಿ ರೆಸ್ಟೋರೆಂಟ್, ಕಂಕನಾಡಿ, ಮಂಗಳೂರು.
**ವಾಹನ ಮಾಲೀಕರು:**
ಶ್ರೀ ಬಿ. ಶ್ರೀಧರ್, ಬಿನ್ ಜಿ. ಪೂವಪ್ಪ
ಸೈಮನ್ ಲೇನ್, ಕಾನೋಪದವು, ಮರೋಳಿ, ಮಂಗಳೂರು ತಾಲ್ಲೂಕು.

**ಪ್ರಕರಣದ ಮುಖ್ಯಾಂಶಗಳು:**

ಅಬಕಾರಿ ಉಪ ನಿರೀಕ್ಷಕರು ನಂ.4 ಇಐಬಿ. ಮಂಗಳೂರು ವಿಭಾಗ, ಮಂಗಳೂರು ಇವರು ದಿನಾಂಕ: 10.07.04 ರಂದು ಸಂಜೆ ಸುಮಾರು 6.00 ಗಂಟೆ ಸಮಯದಲ್ಲಿ ಮಂಗಳೂರು ಮಹಾನಗರ ಪಾಲಿಕೆ ಪಂಪುವೆಲ್ ವೃತ್ತದಿಂದ ಬಿ.ಸಿ.ರೋಡಿಗೆ ಹೋಗುವ ರಾಷ್ಟ್ರೀಯ ಹೆದ್ದಾರಿ 48ರ ಕಪಿತಾನಿಯೋ ಹೈಸ್ಕೂಲ್‌ನ ಎದುರುಗಡೆ ಸಿಬ್ಬಂದಿಯವರೊಂದಿಗೆ ರಸ್ತೆಗಾವಲು ಮಾಡುತ್ತಿದ್ದಾಗ, ಬಿ.ಸಿ.ರೋಡ್ ಕಡೆಯಿಂದ ಮಂಗಳೂರು ಕಡೆಗೆ ಒಂದು ನೀಲಿ ಬಣ್ಣದ ಸ್ಕೂಟರ್ ಬರುವುದು ಕಂಡು, ಸಂಶಯದ ಮೇಲೆ ಆ ಸ್ಕೂಟರನ್ನು ನಿಲ್ಲಿಸಿ ಶೋಧನೆ ಮಾಡಿ ನೋಡಲಾಗಿ ಆ ಸ್ಕೂಟರಿನಲ್ಲಿ ಕಾಲು ಇಡುವ ಜಾಗದಲ್ಲಿ ಒಂದು ರಟ್ಟಿನ ಪೆಟ್ಟಿಗೆ ಇದ್ದು ಅದನ್ನು ಬಿಚ್ಚಿ ನೋಡಲಾಗಿ ಅದರಲ್ಲಿ 15 ಪ್ಲಾಸ್ಟಿಕ್ ಸೀಸೆಗಳಲ್ಲಿ ಮದ್ಯವು ಇರುವುದು ಕಂಡು ಬಂದಿತ್ತು. ನಂತರ ಸ್ಕೂಟರ್ ಸವಾರನಿಗೆ ಸದರಿ ಮದ್ಯವನ್ನು ಸಾಗಾಟ ಮಾಡಲು ಯಾವುದಾದರೂ ರಹದಾರಿ ಪತ್ರಗಳು ಇದೆಯೇ ಎಂದು ವಿಚಾರಿಸಿದಾಗ ಇಲ್ಲವೆಂದು ತಿಳಿಸಿರುತ್ತಾನೆ. ನಂತರ ಜರುಗಿಸಬೇಕಾದ ಎಲ್ಲಾ ಕ್ರಮಗಳನ್ನು ಜರುಗಿಸಿ ನಂತರ ಈ ತರಹದ ಅನಧಿಕೃತ ಮದ್ಯ ಸಾಗಾಟವನ್ನು ಕರ್ನಾಟಕ ಅಬಕಾರಿ ಕಾಯಿದೆ ಪ್ರಕಾರ ಅಪರಾಧವಾಗಿರುವುದರಿಂದ ಸದರಿ ರಟ್ಟಿನ ಪೆಟ್ಟಿಗೆಯಲ್ಲಿದ್ದ ಮದ್ಯದ ಬಾಟ್ಲಿಗಳನ್ನು ತೆಗೆದು

ನೋಡಲಾಗಿ ಪ್ರತಿಯೊಂದು ಬಾಟಲಿನಲ್ಲಿ 750 ಎಂಎಲ್‌ನ ಮದ್ಯವಿದ್ದು ಅದನ್ನು ಖಾತ್ರಿ ಮಾಡಿಕೊಂಡು ನೋಡಲಾಗಿ, ಮದ್ಯದ ಬಾಟಲುಗಳ ಮೇಲೆ ಒರಿಜಿನಲ್ ಚಾಯ್ಸ್ ವಿಸ್ಕಿ ಎಂದು ಮತ್ತು ಕರ್ನಾಟಕ ರಾಜ್ಯದಲ್ಲಿ ಮಾರಾಟಕ್ಕೆ ಮಾತ್ರ ಎಂದು ಬರೆದಿದೆ ಎಂದು ನುಡಿದಿರುತ್ತಾರೆ. ಮತ್ತು ಬಾಟಲ್‌ಗಳ ಮೇಲೆ ಯಾವುದೇ ಚೀಟಿಗಳು ಹಚ್ಚಿರುವುದಿಲ್ಲ. ನಂತರ ಎಲ್ಲ 15 ಪ್ಲಾಸ್ಟಿಕ್ ಬಾಟಲ್‌ಗಳು ಸೇರಿಸಿ ಒಟ್ಟು 11.250 ಲೀಟರು ಮದ್ಯ ಇರುತ್ತದೆ. ಇದರಿಂದ 750 ಎಂಎಲ್‌ನ 2 ಬಾಟಲ್‌ಗಳನ್ನು ರಾಸಾಯನಿಕ ವಿಶ್ಲೇಷಣೆಗಾಗಿ ತೆಗೆದುಕೊಂಡು ಸ್ಥಳದಲ್ಲಿಯೇ ಕ್ರಮವನ್ನು ಜರುಗಿಸಿ, ನಂತರ ಸ್ಕೂಟರನ್ನು ನೋಡಲಾಗಿ ಅದು ನೀಲಿ ಬಣ್ಣದ ಲ್ಯಾಂಬಿ ಸ್ಕೂಟರ್ ಆಗಿದ್ದು, ಇದರ ನೋಂದಣಿ ಸಂಖ್ಯೆ: ಸಿಎನ್‌ಎಕ್ಸ್ 4324 ಹಾಗೂ ಚಾಸೀಸ್ ನಂ.299925 ಎಪಿಐ 150 ಎಲ್‌ಐ ಎಂದು ಇದ್ದು, ನಂತರ/ ಸ್ಕೂಟರಿನ ಚಾಲಕನ ಹೆಸರನ್ನು ವಿಚಾರಿಸಿದಾಗ ತನ್ನ ಹೆಸರು ಹರೀಶ ನಾಯಕ್ (23 ವರ್ಷ) ತಂದೆ: ಡೀಕಯ್ಯ ನಾಯ್ಕ್ ಅಮೆತ್ತಿಯಾರ್ ಮನೆ. ತೆಂಕಕಾರಂಧೂರು ಗ್ರಾಮ ಮತ್ತು ಅಂಚೆ, ಬೆಳ್ತಂಗಡಿ ತಾಲ್ಲೂಕು ಎಂದು ತಿಳಿಸಿರುತ್ತಾನೆ. ಮತ್ತು ಈ ಮದ್ಯ ಎಲ್ಲಿಂದ ಸಾಗಾಣಿಕೆ ಮಾಡಿರುವುದು ಎಂದು ಕೇಳಲಾಗಿ ಸಮರ್ಪಕವಾದ ಉತ್ತರ ನೀಡಿರುವುದಿಲ್ಲ. ನಂತರ ಸ್ಥಳದಲ್ಲಿಯೇ ಪಂಚನಾಮೆ ಜರುಗಿಸಿ ಮದ್ಯದ ಬಾಟಲಿಗಳ ಹಾಗೂ ಸ್ಕೂಟರ್ ಜಪ್ತು ಮಾಡಿ, ಸ್ಕೂಟರ್ ಚಲಿಸುವ ಆರೋಪಿಯನ್ನು ದಸ್ತಗಿರಿ ಮಾಡಿ ತಮ್ಮ ವಶಕ್ಕೆ ತೆಗೆದುಕೊಂಡು ನಂತರ ಮೊಕದ್ದಮೆ ಸಂಖ್ಯೆ: 1/04-05 ರಲ್ಲಿ ಮೊಕದ್ದಮೆಯನ್ನು ದಾಖಲು ಮಾಡಿರುತ್ತಾರೆ.

ಸದರಿ ಜಪ್ತಿ ಮಾಡಿದ ಮದ್ಯದ ಬಾಟಲುಗಳಿಂದ ರಾಸಾಯನಿಕ ಪರೀಕ್ಷೆಗಾಗಿ ತೆಗೆದುಕೊಂಡು ಮಾದರಿ ಮದ್ಯದ ಬಾಟಲುಗಳನ್ನು ರಾಸಾಯನಿಕ ವಿಶ್ಲೇಷಣೆಗೆ ಒಳಪಡಿಸಿ ರಾಸಾಯನಿಕ ವಿಶ್ಲೇಷಕರು, ಮಂಗಳೂರು ಇವರ ಪತ್ರ ಸಂಖ್ಯೆ: 547/2 ದಿನಾಂಕ: 19.07.2004ರ ಪ್ರಕಾರ ಸದರಿ ಎರಡು ಬಾಟಲುಗಳಲ್ಲಿ ಇದ್ದ ಮಾದರಿ ಮದ್ಯವನ್ನು ನಕಲಿ ಮದ್ಯವೆಂದು ದೃಢೀಕರಿಸಿರುತ್ತಾರೆ.

ನಂತರ ರಾಸಾಯನಿಕ ವಿಶ್ಲೇಷಕರ ವರದಿ ಆಧಾರದ ಮೇಲೆ ಸಾಗಾಟ ಮಾಡಲಾದ ವಸ್ತುವು ಮದ್ಯವೆಂದು ಖಾತ್ರಿಯಾದ ನಂತರ, ಸಾರಿಗೆ ಅಧಿಕಾರಿ, ಮಂಗಳೂರು ಇವರು ನೀಡಿರುವ "ಬಿ" ಅಬ್‌ಸ್ಟ್ರಾಕ್ಟ್ ವಹಿ ನಕಲು ಪ್ರಕಾರ ಜಪ್ತು ಮಾಡಲಾದ ಸಿಎನ್‌ಎಕ್ಸ್-4324 ಲ್ಯಾಂಬಿ ಸ್ಕೂಟರಿನ ಮಾಲಿಕರಾದ ಶ್ರೀ ಬಿ. ಶ್ರೀಧರ್ ಮತ್ತು ಆರೋಪಿಯಾದ ಹರೀಶ್ ನಾಯಕ್ ಇವರಿಗೆ ಈ ಕಛೇರಿಯಿಂದ ಕಾರಣ ಕೇಳಿ ನೋಟಿಸನ್ನು ಕಳುಹಿಸಿದ್ದು. ಇಬ್ಬರು ಕೂಡಾ ನೋಟಿಸುಗಳನ್ನು ಪಡೆದು, ಈ ಪ್ರಾಧಿಕಾರಕ್ಕೆ ಯಾವುದೇ ಉತ್ತರ ನೀಡಿರುವುದಿಲ್ಲ ಮತ್ತು ಜಪ್ತು ಮಾಡಲಾದ ಮದ್ಯ ಹಾಗೂ ಸ್ಕೂಟರ್‌ನ ಬಗ್ಗೆ ಮಾಲಿಕತ್ವದ ಬಗ್ಗೆ ಯಾವುದೇ ಅರ್ಜಿಯನ್ನು ಸಲ್ಲಿಸಿ, ನಮ್ಮದೆಂದು ಪಡೆದಿರುವುದಿಲ್ಲ.

ನಂತರ ಈ ಪ್ರಾಧಿಕಾರದ ಮುಂದೆ ತಮ್ಮ ಪರವಾಗಿ ವಾದ ವಿವಾದ ಮಾಡಿಸಲು ಯಾವುದೇ ವಕೀಲರನ್ನು ನೇಮಿಸಿರುವುದಿಲ್ಲ.

ಮೊಕದ್ದಮೆ ತನಿಖೆಯು ಮುಗಿದ ನಂತರ ಈ ಪ್ರಾಧಿಕಾರದಿಂದ ಈ ಮೊಕದ್ದಮೆಯ ವಿಚಾರಣೆಯನ್ನು ಆರಂಭಿಸುವ ಮೊದಲೇ ಪುನಃ ವಾಹನ ಮಾಲಿಕರಾದ ಶ್ರೀ ಬಿ. ಶ್ರೀಧರ್ ಬಿನ್ ಪೂವಪ್ಪ ಮತ್ತು ಮುಖ್ಯ ಮಹಜರು ಸಾಕ್ಷಿಗಳಾದ ಶ್ರೀ ಕೃಷ್ಣ ನಾಯಕ್, ಅಬಕಾರಿ ಉಪ ನಿರೀಕ್ಷಕರು, ಶ್ರೀ ಸಂಕಪ್ಪ ಅಬಕಾರಿ ರಕ್ಷಕ ಮತ್ತು ಲೀಲಾಧರ ಅಬಕಾರಿ ರಕ್ಷಕ ಇವರುಗಳಿಗೆ ಹಾಜರಾತಿ ನೋಟಿಸ್‌ಗಳನ್ನು ಕೊಟ್ಟು ಈ ಪ್ರಾಧಿಕಾರದ ಮುಂದೆ ದಿನಾಂಕ: 03.03.05ರಂದು ಮಧ್ಯಾಹ್ನ 3.00 ಗಂಟೆಗೆ ಸಾಕ್ಷಿ ಹೇಳಲು ಹಾಜರಾಗುವಂತೆ ಸೂಚಿಸಲಾದ ಪ್ರಕಾರ, ದಿನಾಂಕ: 03.03.05ರಂದು ಮಧ್ಯಾಹ್ನ 3.00 ಗಂಟೆ ಈ ಪ್ರಾಧಿಕಾರದ ಮುಂದೆ ಹಾಜರಾದ ಪಿಡಬ್ಲ್ಯೂ-1 ಮತ್ತು ಪಿಡಬ್ಲ್ಯೂ-2 ಇವರುಗಳನ್ನು ಮಾನ್ಯ ಎ.ಡಿ.ಪಿ.ಯವರಿಂದ ಮುಖ್ಯ ವಿಚಾರಣೆ ಮಾಡಲಾಯಿತು.

**ಪಿಡಬ್ಲ್ಯೂ-1**

ಕೃಷ್ಣ ನಾಯ್ಕ್, ಅಬಕಾರಿ ಉಪ ನಿರೀಕ್ಷಕರು ನಂ.4 ಇಐಬಿ, ಮಂಗಳೂರು ವಿಭಾಗ, ಮಂಗಳೂರು ಇವರು ಪ್ರಕರಣದ ಫಿರ್ಯಾದುದಾರರಾಗಿದ್ದು, ಅವರು ದಿನಾಂಕ: 03.03.2005 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ವಿಚಾರಣೆಯನ್ನು ಮಾಡಲಾಯಿತು. ತಾನು ದಿನಾಂಕ: 10.07.2004ರಂದು ಸಂಜೆ 6.00 ಗಂಟೆ ಸಮಯಕ್ಕೆ ಅಬಕಾರಿ ಉಪ ಅಧೀಕ್ಷಕರ ನಿರ್ದೇಶನದ ಮೇರೆಗೆ ಸಿಬ್ಬಂದಿಯವರೊಂದಿಗೆ ನಾನು ಮಂಗಳೂರು ನಗರದ ಕಂಕನಾಡಿ ಗ್ರಾಮದ ಪಂಪ್‌ವೆಲ್‌ನಿಂದ ಬಿ.ಸಿ. ರೋಡಿಗೆ ಬರುವ ರಾಷ್ಟ್ರೀಯ ಹೆದ್ದಾರಿಯಲ್ಲಿ ಅಕ್ರಮವಾಗಿ ಸಾರಾಯಿ ಸಾಗಾಟ ಮಾಡುವ ವಾಹನಗಳನ್ನು ತಪಾಸಣೆ ಮಾಡಲೆಂದು ಕರ್ತವ್ಯ ನಿರ್ವಹಿಸುತ್ತಿದ್ದೆವು. ಆ ಸಮಯದಲ್ಲಿ ಒಂದು ಸ್ಕೂಟರ್ ಬಿ.ಸಿ.ರೋಡ್ ಕಡೆಯಿಂದ ವೇಗವಾಗಿ ಬರುತ್ತಿರುವುದನ್ನು ನೋಡಿದೆವು. ಸಮವಸ್ತ್ರದಲ್ಲಿದ್ದ ನಮ್ಮನ್ನು ನೋಡಿದ ಸ್ಕೂಟರ್ ಸವಾರನು ನಮ್ಮನ್ನು ನೋಡಿ ಗಾಬರಿಯಾದಂತೆ ವರ್ತಿಸಿದನು. ಕೂಡಲೇ ನಾವು ಸ್ಕೂಟರ್ ಸವಾರನನ್ನು ತಡೆದು ನಿಲ್ಲಿಸಿದೆವು. ಆ ಸಮಯದಲ್ಲಿ ಸ್ಕೂಟರನ್ನು ಪರಿಶೀಲಿಸುವ ಮುನ್ನ ನ್ಯಾಯಾಲಯದಿಂದ ಸರ್ಚ್‌ವಾರೆಂಟನ್ನು ಪಡೆದುಕೊಳ್ಳಲು ಸಮಯಾವಕಾಶ ಇಲ್ಲದ್ದರಿಂದ ಕಾರಣಗಳನ್ನು ನಮೂದಿಸಿ ಒಂದು ಸರ್ಚ್ ಮೆಮೋವನ್ನು ತಯಾರಿಸಿದೆವು. ನಂತರ ನಾವು ಕೂಡಲೇ ಸ್ಕೂಟರನ್ನು ಪರಿಶೀಲಿಸಲಾಗಿ, ಸ್ಕೂಟರ್‌ನಲ್ಲಿ ಕಾಲಿಡುವ ಸ್ಥಳದಲ್ಲಿ ಒಂದು ಮದ್ಯ ತುಂಬಿದ ಪೆಟ್ಟಿಗೆಯನ್ನು ಒಂದು ಗೋಣಿ ಚೀಲದಲ್ಲಿ ಇಟ್ಟಿದ್ದು ಕಂಡು ಬಂತು. ಸದರಿ ಗೋಣಿ ಚೀಲವನ್ನು ತೆರೆದು ರಟ್ಟಿನ ಪೆಟ್ಟಿಗೆಯನ್ನು ತೆರೆದು ನೋಡಲಾಗಿ, ಅದರಲ್ಲಿ ತಲಾ 750 ಎಂ.ಎಲ್ ಗಾತ್ರದ 15 ಪ್ಲಾಸ್ಟಿಕ್ ಬಾಟಲ್‌ಗಳು ಇದ್ದವು. ಸದರಿ ಬಾಟ್ಲಿಗಳ ಮೇಲೆ ಒರಿಜಿನಲ್ ಚಾಯ್ಸ್ ಎಂದು ಬರೆದ ಲೇಬಲ್ ಇದ್ದು ಅವುಗಳ ಮೇಲೆ ಕರ್ನಾಟಕ ರಾಜ್ಯದಲ್ಲಿ ಮಾರಾಟಕ್ಕೆ ಮಾತ್ರ, 25 ಯು.ಪಿ. ಎಂದು ಬರೆದ ಲೇಬಲ್ ಇತ್ತು. ಸದರಿ ಬಾಟ್ಲಿಗಳಿಗೆ ಭದ್ರತಾ ಚೀಟಿಗಳನ್ನು ಹಚ್ಚಿರಲಿಲ್ಲ. ಈ ಕಾರಣದಿಂದ ಅವುಗಳು ಸಂಶಯಿತ ನಕಲಿ ಮದ್ಯದ ಬಾಟ್ಲಿಗಳಿಗೆ ಭದ್ರತಾ ಚೀಟಿಗಳನ್ನು ಹಚ್ಚಿರಲಿಲ್ಲ. ಈ ಕಾರಣದಿಂದ ಅವುಗಳು ಸಂಶಯಿತ ನಕಲಿ ಮದ್ಯದ ಬಾಟ್ಲಿಗಳೆಂದು ಕಂಡು ಬಂತು. ಸದರಿ ಬಾಟ್ಲಿಗಳನ್ನು ವಾಹನದಲ್ಲಿ ಸಾಗಿಸಲು ರಹದಾರಿ ಪತ್ರದ ಬಗ್ಗೆ ಅವನನ್ನು ವಿಚಾರಿಸಲಾಗಿ, ಅವರಲ್ಲಿ ಯಾವುದೇ ರಹದಾರಿ ಪತ್ರವಿಲ್ಲವೆಂದು ತಿಳಿಸಿದನು. ಸ್ಥಳಕ್ಕೆ ಬೇರೆ ಸಾಕ್ಷಿದಾರರನ್ನು ತರಲು ಪ್ರಯತ್ನಿಸಿದೆವು. ಆದರೆ ಯಾರೂ ಸಿಗಲಿಲ್ಲ. ಸದರಿ ಬಾಟ್ಲಿಗಳಲ್ಲಿ ಒಟ್ಟು 11.250 ಲೀಟರು ಮದ್ಯ ಇದ್ದುದ್ದು ಕಂಡುಬಂತು. ಸದರಿ ಮದ್ಯದ ಬಾಟ್ಲಿಗಳನ್ನು ಎಲ್ಲಿಂದ ತರಲಾಗಿತ್ತು ಮತ್ತು ಎಲ್ಲಿಗೆ ಕೊಂಡೊಯ್ಯುವುದಾಗಿ ವಿಚಾರಿಸಲಾಗಿ, ಸ್ಕೂಟರ್ ಸವಾರನು ಸಮರ್ಪಕವಾದ ಉತ್ತರ ಕೊಡಲಿಲ್ಲ. ಸ್ಕೂಟರ್ ಸವಾರನ ಹೆಸರನ್ನು ಕೇಳಲಾಗಿ ಆತನು ತನ್ನ ಹೆಸರು ಹರೀಶ್ ನಾಯ್ಕ್ ಎಂದು ಪ್ರಾಯ 23 ವರ್ಷ, ತಂದೆ: ದಿ:ಡೀಕಯ್ಯ ನಾಯ್ಕ್, ಅಮೆತ್ತಿಯಾರ್ ಮನೆ, ತೆಂಕಕಾರಂದೂರು ಗ್ರಾಮ, ಬೆಳ್ತಂಗಡಿ ತಾಲ್ಲೂಕು ಹಾಗೂ ತಾನು ಕಂಕನಾಡಿ ರೆಸ್ಟೋರೆಂಟ್‌ನಲ್ಲಿ ಕೆಲಸ ಮಾಡುವವನೆಂದು ತಿಳಿಸಿದನು. ಸ್ಥಳದಲ್ಲಿ ವಶಪಡಿಸಿಕೊಂಡ ಮದ್ಯದ ಬಾಟ್ಲಿಗಳಿಂದ 2 ಬಾಟ್ಲಿಗಳನ್ನು ಪ್ರತ್ಯೇಕಿಸಿ ಮಾದರಿ ಸೀಸೆಗಳನ್ನು ತಯಾರಿಸಿದೆವು. ಅವುಗಳಿಗೆ ಇಲಾಖಾ ಸೀಲಿನಿಂದ ಸೀಲು ಮಾಡಿ ಇಲಾಖಾ ಸೀಲು ಮುದ್ರಿಸಿದೆವು. ಅದೇ ಸೀಲಿನಿಂದ ಮಾದರಿ ಸೀಲನ್ನು ತಯಾರಿಸಲಾಯಿತು. ಸ್ಕೂಟರ್ ಸವಾರನ ಹೆಸರು, ವಿಳಾಸ ಇರುವ ಚೀಟಿಗಳನ್ನು ತಯಾರಿಸಿ ಮಾದರಿ ಸೀಸೆಗಳ ಮೇಲೆ ಅಂಟಿಸಿದೆವು. ಸ್ಕೂಟರ್‌ಗೆ ಸಂಬಂಧಿಸಿದ ದಾಖಲೆಗಳು ಸ್ಕೂಟರ್ ಸವಾರನಲ್ಲಿ ಇರಲಿಲ್ಲ. ಸದರಿ ಸ್ಕೂಟರ್ ನೀಲಿ ಬಣ್ಣದ್ದು ಇದ್ದು, ಅದರ ನೋಂದಣಿ ಸಂಖ್ಯೆ: ಸಿಎನ್‌ಎಕ್ಸ್:4324 ಇರುತ್ತದೆ. ಸದರಿ ವಾಹನದ ಚಾಸೀಸ್ ನಂಬರನ್ನು ಪರಿಶೀಲಿಸಿದೆವು. ಸ್ಥಳದಲ್ಲಿ ಒಂದು ಮಹಜರನ್ನು ತಯಾರಿಸಿದೆವು. ಸದರಿ ಮಹಜರಿಗೆ ನಾನು ಮತ್ತು ಅಬಕಾರಿ ರಕ್ಷಕರು ಸಹಿ ಮಾಡಿರುತ್ತೇವೆ. ಮಹಜರಿಗೆ ಮೂಲ ಪ್ರತಿಯು ಮಾನ್ಯ ಜೆ.ಎಂ.ಎಫ್.ಸಿ. ನ್ಯಾಯಾಲಯದಲ್ಲಿದ್ದು, ಅದರ ಛಾಯಾ ಪ್ರತಿಯನ್ನು ಈ ಪ್ರಾಧಿಕಾರದ ಮುಂದೆ ಹಾಜರುಪಡಿಸಿದೆವು. ಅದನ್ನು ಈಗ ನೋಡಿ

ಗುರುತಿಸಲಾಯಿತು. ಅದನ್ನು ನಿಶಾನೆ ಪಿ-1 ಎಂದು ಗುರುತಿಸಲಾಯಿತು. ಸ್ಥಳದಲ್ಲಿ ಸೊತ್ತುಗಳನ್ನು ಮತ್ತು ಆರೋಪಿಯನ್ನು ವಶಕ್ಕೆ ತೆಗೆದುಕೊಂಡೆವು. ಆರೋಪಿ ಮತ್ತು ಸೊತ್ತನ್ನು ಕಾರ್ಯಾಲಯಕ್ಕೆ ತಂದು ನಮ್ಮ ಕಾರ್ಯಾಲಯದಲ್ಲಿ ಪ್ರಕರಣವನ್ನು ಇಐಬಿ:ಅಸಇ:4:ಪ್ರ.ಮಾ.ವ.ಸಂ.:1:2004-05, ದಿನಾಂಕ: 10.07.2004 ರಲ್ಲಿ ಪ್ರಕರಣವನ್ನು ನೋಂದಾಯಿಸಿ ಪ್ರಥಮ ಮಾಹಿತಿ ವರದಿಯನ್ನು ನ್ಯಾಯಾಲಯಕ್ಕೆ ಸಲ್ಲಿಸಿರುತ್ತೇನೆ. ಆರೋಪಿಯು ಸೂಕ್ತ ಜಾಮೀನು ನೀಡಿದ್ದರಿಂದ ಆರೋಪಿಯನ್ನು ಜಾಮೀನಿನ ಮೇಲೆ ಬಿಡುಗಡೆಗೊಳಿಸಿರುತ್ತೇವೆ. ದಿನಾಂಕ: 19.07.04 ರಂದು ಈ ಪ್ರಕರಣದ ಮಾದರಿ ಸೀಸೆಗಳನ್ನು ನಮ್ಮ ಅಬಕಾರಿ ರಕ್ಷಕರಾದ ಶ್ರೀ ಲೀಲಾಧರ್ ಇವರ ಮುಖಾಂತರ ರಾಸಾಯನಿಕ ತಜ್ಞರಿಗೆ ಕಳುಹಿಸಿರುತ್ತೇನೆ. ದಿನಾಂಕ: 22.11.2004 ರಂದು ಈ ಪ್ರಕರಣದ ಪರೀಕ್ಷಿಸಲ್ಪಟ್ಟ 2 ಮಾದರಿ ಸೀಸೆ ಮತ್ತು ವರದಿಯನ್ನು ಪಡೆದುಕೊಂಡೆವು. ವಶಪಡಿಸಿಕೊಂಡ ಸ್ಕೂಟರ್‌ನ ಮಾಲಿಕತ್ವದ ಬಗ್ಗೆ ತಿಳಿದುಕೊಳ್ಳಲು ಸಂಬಂಧಿಸಿದ ಸಾರಿಗೆ ಅಧಿಕಾರಿಗಳಿಗೆ ಪತ್ರ ಬರೆದೆನು. ಸಾರಿಗೆ ಅಧಿಕಾರಿಯಿಂದ ಈ ಕುರಿತು ಪತ್ರ ಬಂದಿದ್ದು, ಸದರಿ ಪತ್ರದಂತೆ ಶ್ರೀ ಬಿ. ಶ್ರೀಧರ ಎಂಬವರು ಸ್ಕೂಟರ್‌ನ ಮಾಲಿಕರಾಗಿರುತ್ತಾರೆ. ದಿನಾಂಕ: 08.12.2004 ರಂದು ವಾಹನದ ಮಾಲಿಕರನ್ನು ದಸ್ತಗಿರಿ ಮಾಡಿ ಅದೇ ದಿನ ಜಮೀನಿನ ಮೇಲೆ ಬಿಡುಗಡೆ ಮಾಡಿದ ವರದಿಯನ್ನು ಮಾನ್ಯ ಜೆ.ಎಂ.ಎಫ್.ಸಿ. ನ್ಯಾಯಾಲಯಕ್ಕೂ ಹಾಗೂ ಅಧಿಕೃತ ಅಧಿಕಾರಿಗಳಿಗೆ ವರದಿಯನ್ನು ಸಲ್ಲಿಸಿರುತ್ತೇನೆ. ಈ ಪ್ರಕರಣದಲ್ಲಿ ವಶಪಡಿಸಿಕೊಂಡ ಸೊತ್ತುಗಳಾದ ಮದ್ಯದ ಬಾಟ್ಲಿ ಮತ್ತು ಸ್ಕೂಟರನ್ನು ವಶದಲ್ಲಿಟ್ಟುಕೊಳ್ಳಲು ಅಧಿಕೃತ ಅಧಿಕಾರಿಯವರನ್ನು ಅನುಮತಿ ಪಡೆದಿರುತ್ತೇನೆ. ಈ ಬಗ್ಗೆ ಅಧಿಕೃತ ಅಧಿಕಾರಿಯವರಿಗೆ ನೀಡಿದ ವರದಿಯನ್ನು ನೋಡಿ ಗುರುತಿಸಿದೆನು. ಅದನ್ನು ನಿಶಾನೆ ಪಿ-2 ಎಂದು ಗುರುತಿಸಲಾಯಿತು. ಪ್ರಥಮ ಮಾಹಿತಿ ವರದಿಯನ್ನು ನೋಡಿದೆನು. ಅದನ್ನು ನಿಶಾನೆ ಪಿ-3 ಎಂದು ಗುರುತಿಸಲಾಯಿತು.

ರಾಸಾಯನಿಕ ತಜ್ಞರು ನೀಡಿದ ವರದಿಯ ಛಾಯಾ ಪ್ರತಿಯನ್ನು ಈ ಪ್ರಾಧಿಕಾರದ ಮುಂದೆ ಹಾಜರುಪಡಿಸಿರುತ್ತೇನೆ. ಅದನ್ನು ನಿಶಾನೆ ಪಿ-4 ಎಂದು ಗುರುತಿಸಲಾಯಿತು. ಈ ಪ್ರಕರಣದಲ್ಲಿ ಜೆ.ಎಂ.ಎಫ್.ಸಿ. ನ್ಯಾಯಾಲಯಕ್ಕೆ ದೋಷಾರೋಪಣಾ ಪಟ್ಟಿಯನ್ನು ಇದುವರೆಗೆ ಸಲ್ಲಿಸಿರುವುದಿಲ್ಲ.

ನಂತರ ಈ ಮೊಕದ್ದಮೆಯ ಕುರಿತು ಆರೋಪಿಗಳಾದ ವಾಹನ ಮಾಲಿಕರನ್ನು ಅಥವಾ ವಾಹನ ಚಾಲಕ ಇವರ ಕಡೆಯಿಂದ ಯಾವುದೇ ತರಹದ ಪಾರ್ಟಿ ಸವಾಲು ಇರಲಿಲ್ಲ.

**ಪಿಡಬ್ಲ್ಯೂ-2**

ಲೀಲಾಧರ ಕುಮಾರ್, ಅಬಕಾರಿ ರಕ್ಷಕ, ಇಐಬಿ ಮಂಗಳೂರು ವಿಭಾಗ, ಮಂಗಳೂರು ಇವರು ಪ್ರಕರಣದ ಕೆಮಿಕಲ್ ಕ್ಯಾರಿಯರ್ ಆಗಿದ್ದು, ಇವರು ದಿನಾಂಕ: 03.03.2005 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ತಮ್ಮ ಹೇಳಿಕೆಯನ್ನು ನೀಡಿರುತ್ತಾರೆ. ತಾನು ದಿನಾಂಕ: 19.07.2004 ರಂದು 750 ಎಂ.ಎಲ್ ಗಾತ್ರದ 2 ಮಾದರಿ ಸೀಸೆಗಳನ್ನು ನಮ್ಮ ಅಬಕಾರಿ ಉಪ ನಿರೀಕ್ಷಕರಾದ ಶ್ರೀ ಕೃಷ್ಣ ನಾಯ್ಕ್‌ರವರಿಂದ ಪಡೆದುಕೊಂಡು ಅದೇ ದಿನ ರಾಸಾಯನಿಕ ತಜ್ಞರಲ್ಲಿಗೆ ತಲುಪಿಸಿರುತ್ತೇನೆ. ದಿನಾಂಕ: 22.11.2004ರಂದು ತಜ್ಞರು ಪರೀಕ್ಷಿಸಿದ ಸದರಿ ಮಾದರಿ ಸೀಸೆಗಳನ್ನು ತಜ್ಞರಿಂದ ಪಡೆದುಕೊಂಡು ನಮ್ಮ ಅಬಕಾರಿ ಉಪ ನಿರೀಕ್ಷಕರಿಗೆ ಸಲ್ಲಿಸಿದೆನು, ಸದರಿ ಮಾದರಿ ಸೀಸೆಯೊಂದಿಗೆ ಒಂದು ಲಕೋಟೆಯನ್ನು ತಜ್ಞರು ಕೊಟ್ಟಿದ್ದನ್ನು ಅಬಕಾರಿ ಉಪ ನಿರೀಕ್ಷಕರಿಗೆ ತಲುಪಿಸಿರುತ್ತೇನೆ.

ನಂತರ ಈ ಮೊಕದ್ದಮೆಯ ಕುರಿತು ಆರೋಪಿಗಳಾದ ವಾಹನ ಮಾಲಿಕರನ್ನು ಅಥವಾ ವಾಹನ ಚಾಲಕ ಇವರ ಕಡೆಯಿಂದ ಯಾವುದೇ ತರಹದ ಪಾರ್ಟಿ ಸವಾಲು ಇರಲಿಲ್ಲ.

ಆದುದರಿಂದ ಪಿಡಬ್ಲ್ಯೂ-1 ಮತ್ತು ಪಿಡಬ್ಲ್ಯೂ-2 ಇವರುಗಳನ್ನು ಈ ನ್ಯಾಯಾಲಯದಲ್ಲಿ ನೀಡಲಾದ ಸಾಕ್ಷಿಯನ್ನು ಗಣನೆಗೆ ತೆಗೆದುಕೊಂಡು ಲ್ಯಾಂಬಿ ಸ್ಕೂಟರ್ ಸಂಖ್ಯೆ: ಸಿಎನ್‌ಎಕ್ಸ್:4324 ರಲ್ಲಿ ಅನಧಿಕೃತವಾಗಿ ಒಂದು ರಟ್ಟಿನ ಪೆಟ್ಟಿಗೆಯಲ್ಲಿ 15 ಬಾಟಲುಗಳಿದ್ದು ಒಟ್ಟು 11.500 ಲೀಟರು ಮದ್ಯವನ್ನು ಸಾಗಾಟ ಮಾಡುವುದು ಅನಧಿಕೃತವೆಂದು ಸಾಬೀತು ಆಗಿರುವುದರಿಂದ ಮತ್ತು ಸದರಿ ಮದ್ಯವನ್ನು ಜಪ್ತು ಮಾಡಲಾದ ಲ್ಯಾಂಬಿ ಸ್ಕೂಟರ್ ಸಂಖ್ಯೆ: ಸಿಎನ್‌ಎಕ್ಸ್: 4324 ರಲ್ಲಿ ಅನಧಿಕೃತವಾಗಿ ಸಾಗಾಟ ಮಾಡುವುದನ್ನು ಕರ್ನಾಟಕ ಅಬಕಾರಿ ಕಾಯಿದೆ ಕಲಂ 11, 14 ರೀತ್ಯಾ ಅಪರಾಧವಾಗಿದ್ದು, 32, 33 ಹಾಗೂ 38(ಎ) ಪ್ರಕಾರ ಶಿಕ್ಷಾರ್ಹ ಆಗಿರುವುದರಿಂದ, ನೀಲಿ ಬಣ್ಣದ ಲ್ಯಾಂಬಿ ಸ್ಕೂಟರ್ ಸಂಖ್ಯೆ: ಸಿಎನ್‌ಎಕ್ಸ್-4324ನ್ನು ಅನಧಿಕೃತವಾಗಿ ಮದ್ಯವನ್ನು ಸಾಗಾಟ ಮಾಡಲು ಬಳಸಿದ ಕಾರಣಕ್ಕೆ, ಸದರಿ ಸ್ಕೂಟರನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಈ ಪ್ರಾಧಿಕಾರವು ಸಾಕ್ಷಿಗಳ ಹೇಳಿಕೆ ಆಧಾರದ ಮೇಲೆ ಅಭಿಪ್ರಾಯಪಟ್ಟು ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಆದೇಶ**

ಶಾಕೀರ್ ಅಹ್ಮದ್ ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಅಧಿನಿಯಮ 1965 ಕಲಂ 43(ಎ) ಯಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ 43(ಬಿ)ರ ಅನ್ವಯ ಅನುಸರಿಸಬೇಕಾದ ಎಲ್ಲಾ ಕ್ರಮಗಳನ್ನು ಜರುಗಿಸಿದ ನಂತರ ಕಲಂ 43(ಸಿ) ರನ್ವಯ ಅಬಕಾರಿ ಉಪ ನಿರೀಕ್ಷಕರು, ನಂ.4 ಇಐಬಿ, ಮಂಗಳೂರು ವಿಭಾಗ, ಮಂಗಳೂರು ಇವರ ಮೊಕದ್ದಮೆ ಸಂಖ್ಯೆ: 1/2004-05 ದಿನಾಂಕ: 10.07.2004ರಲ್ಲಿ ಜಪ್ತು ಮಾಡಿಕೊಳ್ಳಲಾದ ವಾಹನ ಲ್ಯಾಂಬಿ ಸ್ಕೂಟರ್ ಸಂಖ್ಯೆ: ಸಿಎನ್‌ಎಕ್ಸ್-4324ನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ ದಿನಾಂಕ: 07.04.2005ರಂದು ಉತ್ತಲೇಖನ ಕೊಟ್ಟು ಕಂಪ್ಯೂಟರಿನಲ್ಲಿ ಮುದ್ರಿಸಿ ಪ್ರತಿಯನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

**ಶಾಕೀರ್ ಅಹ್ಮದ್**
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಅನುಬಂಧ-1**

**ಫಿರ್ಯಾದುದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ:**

ಪ್ರಾ.ಸಾ.1- ಶ್ರೀ ಕೃಷ್ಣ ನಾಯಕ್, ಅಬಕಾರಿ ಉಪ ನಿರೀಕ್ಷಕರು, ನಂ.4 ಗುಪ್ತವಾರ್ತಾದಳ, ಮಂಗಳೂರು ವಿಭಾಗ, ಮಂಗಳೂರು.

ಪ್ರಾ.ಸಾ.2- ಶ್ರೀ ಲೀಲಾಧರ, ಅಬಕಾರಿ ರಕ್ಷಕ, ಇಐಬಿ, ಮಂಗಳೂರು ವಿಭಾಗ, ಮಂಗಳೂರು.

**ಅನುಬಂಧ-2**

**ಫಿರ್ಯಾದುದಾರರ ಪರ ಮಂಡಿಸಲಾದ ದಾಖಲೆಗಳು:**

ನಿಶಾನೆ ಪಿ-1- ಮಹಜರಿನ ಛಾಯಾ ಪ್ರತಿ

ನಿಶಾನೆ ಪಿ-2- ಅಧಿಕೃತ ಅಧಿಕಾರಿಯವರಿಗೆ ನೀಡಿದ ವರದಿ

ನಿಶಾನೆ ಪಿ-3- ಪ್ರಥಮ ಮಾಹಿತಿ ವರದಿ
ನಿಶಾನೆ ಪಿ-4- ರಾಸಾಯನಿಕ ತಜ್ಞರು ನೀಡಿದ ಛಾಯಾ ಪ್ರತಿ.

**ಶಾಕೀರ್ ಅಹ್ಮದ್**
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

ಪಿ.ಆರ್.676

**ಕಂದಾಯ ಇಲಾಖೆ**

**ಮೈಸೂರು ಜಿಲ್ಲೆ, ಕೆ.ಆರ್. ನಗರ ತಾಲ್ಲೂಕು ತಹಸೀಲ್ದಾರ್‌ರವರ ಕಾರ್ಯಾಲಯದಿಂದ,**

**ನಂ.ಎಲ್‌ಎನ್‌ಡಿ:ಪಿಆರ್:102:2001-02, ದಿನಾಂಕ: 11ನೇ ಮಾರ್ಚ್, 2005**

**ವಿಷಯ:** ಕೆ.ಆರ್.ನಗರ ತಾಲ್ಲೂಕು ಕಸಬಾ ಹೋಬಳಿ ಕಾಳೇನಹಳ್ಳಿ ಸ.ನಂ.41ರಲ್ಲಿ 0-17 ಗುಂಟೆ ಸರ್ಕಾರಿ ಕಟ್ಟೆಯನ್ನು ರದ್ದುಪಡಿಸಿ ಉದ್ಯಾನವನಕ್ಕೆ ಕಾಯ್ದಿರಿಸುವ ವಿಚಾರವಾಗಿ.

**ಉಲ್ಲೇಖ:** ಜಿಲ್ಲಾಧಿಕಾರಿಗಳು ಮೈಸೂರು ಜಿಲ್ಲೆ, ಮೈಸೂರುರವರು ಪತ್ರದ ಸಂಖ್ಯೆ: ಎಲ್‌ಎನ್‌ಡಿ(2) ಸಿಆರ್: 174:2003-2004 ದಿನಾಂಕ: 07.02.2005.

ಕೆ.ಆರ್.ನಗರ ತಾಲ್ಲೂಕು ಕಸಬಾ ಹೋಬಳಿ ಕಾಳೇನಹಳ್ಳಿ ಗ್ರಾಮದ ಸ.ನಂ. 41ರಲ್ಲಿ 0-17 ಗುಂಟೆ ಸರ್ಕಾರಿ ಕಟ್ಟೆಯಾಗಿದ್ದು, ಸದರಿ ಕಟ್ಟೆಯ ವಿಸ್ತೀರ್ಣವು ಕೆ.ಆರ್. ನಗರ ಪುರಸಭೆ ವ್ಯಾಪ್ತಿಯೊಳಗೆ ಒಳಗೊಂಡಿದ್ದು, ಸುತ್ತಾಮುತ್ತ ಮನೆಗಳು ನಿರ್ಮಾಣಗೊಂಡಿರುತ್ತದೆ. ಸದರಿ ಕಟ್ಟೆಯ ಜಮೀನನ್ನು ಸಾರ್ವಜನಿಕರು ಒತ್ತುವರಿ ಮಾಡಿಕೊಳ್ಳುವ ಸಂಭವವಿರುವುದರಿಂದ ಈ ಜಮೀನಿನಲ್ಲಿ ಸಾರ್ವಜನಿಕ ಉದ್ದೇಶ ಹಾಗೂ ಪಟ್ಟಣ ನೈರ್ಮಲ್ಯೀಕರಣ ಉದ್ದೇಶವನ್ನೊಳಗೊಂಡಂತೆ ಉದ್ಯಾನವನ ನಿರ್ಮಾಣ ಮಾಡಲು ಮಂಜೂರಾತಿಗಾಗಿ ಮೈಸೂರು ಜಿಲ್ಲಾಧಿಕಾರಿಗಳಿಗೆ ಪ್ರಸ್ತಾವನೆ ಸಲ್ಲಿಸಲಾಗಿತ್ತು.

ಉಲ್ಲೇಖದಂತೆ ಜಿಲ್ಲಾಧಿಕಾರಿಗಳು ರಾಜ್ಯ ಪತ್ರದಲ್ಲಿ ಪ್ರಕಟಿಸಿ ಸಾರ್ವಜನಿಕರ ಆಕ್ಷೇಪಣಾ ಬಗ್ಗೆ ಪ್ರಚುರಪಡಿಸಲು ತಿಳಿಸಿರುವಂತೆ, ಸದರಿ ಕಟ್ಟೆಯು ತನ್ನ ಕಟ್ಟೆಯ ಎಲ್ಲಾ ಲಕ್ಷಣಗಳನ್ನು ಕಳೆದುಕೊಂಡಿದ್ದು, ಸಂಬಂಧಪಟ್ಟ ಸಹಾಯಕ ಕಾರ್ಯಪಾಲಕ ಅಭಿಯಂತರರು ಜಿಲ್ಲಾ ಪಂಚಾಯತ್ ಉಪವಿಭಾಗ ಕೆ.ಆರ್. ನಗರ ರವರು ತಮ್ಮ ಇಲಾಖೆಯ ಅಭ್ಯಂತರವೇನೂ ಇಲ್ಲವೆಂದು ತಿಳಿಸಿರುವ ಮೇರೆಗೆ ಸದರಿ ಕಟ್ಟೆಯನ್ನು ಉದ್ಯಾನವನ ನಿರ್ಮಾಣಕ್ಕಾಗಿ ಕಾಯ್ದಿರಿಸಲು ಸಾರ್ವಜನಿಕರ ಆಕ್ಷೇಪಣೆ ಬಗ್ಗೆ ಪ್ರಕಟಿಸಲಾಗಿದೆ.

**ಪರಿವಿಡಿ**

ಜಿಲ್ಲೆ: ಮೈಸೂರು ತಾಲ್ಲೂಕು: ಕೆ.ಆರ್.ನಗರ ಹೋಬಳಿ: ಕಸಬಾ ಗ್ರಾಮ: ಕಾಳೇನಹಳ್ಳಿ

| ಕ್ರಮ ಸಂಖ್ಯೆ | ಖಾತೆದಾರರ ಅಥವಾ ಅನುಭವದಾರರ ಹೆಸರು | ಸ.ನಂ. | ತರಹೆ | ಚೆಕ್ಕುಬಂದಿ | ವಿಸ್ತೀರ್ಣ |
|---|---|---|---|---|---|
| 1. | ಸರ್ಕಾರಿ ಕಟ್ಟೆ | 41 | ಖುಷ್ಕಿ | ಪೂರ್ವ: ಗ್ರಾಮದ ಬಡಾವಣೆ | 0-17 |
| | | | | ಪಶ್ಚಿಮ: ಗ್ರಾಮದ ಬಡಾವಣೆ<br>ಉತ್ತರ: ರಸ್ತೆ<br>ದಕ್ಷಿಣ: ಗ್ರಾಮದ ಬಡಾವಣೆ | |

**ಷರಾ:** ಈ ಮೇಲ್ಕಂಡಂತೆ ಸದರಿ ಜಮೀನಿನ ವಿಸ್ತೀರ್ಣವನ್ನು ಉದ್ಯಾನವನಕ್ಕೆ ಕಾಯ್ದಿರಿಸುವ ಬಗ್ಗೆ ಸಾರ್ವಜನಿಕ ಆಕ್ಷೇಪಣೆ ಏನಾದರೂ ಇದ್ದಲ್ಲಿ ರಾಜ್ಯ ಪತ್ರ ಪ್ರಕಟಿಸಿ ಒಂದು ತಿಂಗಳೊಳಗಾಗಿ ಲಿಖಿತ ಮೂಲಕ ತಿಳಿಸತಕ್ಕದ್ದು.

ತಹಸೀಲ್ದಾರ್,
ಕೃಷ್ಣರಾಜನಗರ ತಾಲ್ಲೂಕು.

ಪಿ.ಆರ್.677

**ತಹಸೀಲ್ದಾರ ಹಾಗೂ ತಾಲ್ಲೂಕು ದಂಡಾಧಿಕಾರಿಗಳು: ಹೊಳೆನರಸೀಪುರ ತಾಲ್ಲೂಕು: ಹೊಳೆನರಸೀಪುರ**

**ವಿಷಯ:** ಹೊಳೆನರಸೀಪುರ ತಾಲ್ಲೂಕಿನ ಹೇಮಾವತಿ ನದಿ ಪಾತ್ರದಿಂದ ಅಕ್ರಮವಾಗಿ ಯಾಂತ್ರಿಕ ಉಪಕರಣಗಳನ್ನು ಬಳಸಿ ಮರಳು ತೆಗೆಯುವುದನ್ನು ನಿಷೇಧಿಸಿ ಸಿ.ಆರ್.ಪಿ.ಸಿ. ಕಲಂ 144ರಡಿ ನಿಷೇದಾಜ್ಞೆ ಜಾರಿಗೊಳಿಸುವ ಬಗ್ಗೆ.

**ಉಲ್ಲೇಖ:**
1. ಹಿರಿಯ ಭೂ ವಿಜ್ಞಾನಿಗಳು, ಹಾಸನ ರವರ ಪತ್ರ ನಂ. ಗ.ಭೂ.ಇ.:ಹಾ.ಬ.ನಿ.: ಮರಳು:04-05:6137 ದಿನಾಂಕ: 29.03.2005 ಜಿಲ್ಲಾಧಿಕಾರಿಗಳು, ಹಾಸನ ರವರಿಗೆ ಬರೆದಿರುವ ಪತ್ರ.
2. ಮಾನ್ಯ ಜಿಲ್ಲಾಧಿಕಾರಿಗಳು, ಹಾಸನ ರವರ ಪತ್ರ ನಂ. ಐಎಸ್‌ಡಿ-19:04-05 ದಿನಾಂಕ: 07.04.2005.
3. ಸಾರ್ವಜನಿಕ ಮೌಖಿಕ ದೂರುಗಳು.

**ಪ್ರಸ್ತಾವನೆ:**

ಹಾಸನ ಜಿಲ್ಲಾ ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ಹಿರಿಯ ಭೂ ವಿಜ್ಞಾನಿಗಳು ಉಲ್ಲೇಖ (1)ರ ಪತ್ರದಲ್ಲಿ ಮಾನ್ಯ ಜಿಲ್ಲಾಧಿಕಾರಿಗಳಿಗೆ ವರದಿ ಮಾಡುತ್ತಾ, ಕೆಲವು ವ್ಯಕ್ತಿಗಳು ಹೇಮಾವತಿ ನದಿ ಪಾತ್ರದಲ್ಲಿ ಯಾವುದೇ ಪರವಾನಗಿ ಪಡೆಯದೆ, ಯಾಂತ್ರಿಕ ಉಪಕರಣಗಳನ್ನು ಬಳಸಿ ಮರಳು ತೆಗೆಯುತ್ತಿರುವುದಾಗಿಯೂ ಹಾಗೂ ಸಾಗಾಣಿಕೆ ಮಾಡುತ್ತಿರುವುದಾಗಿಯೂ ಇದರಿಂದ ಸರ್ಕಾರಕ್ಕೆ ನಷ್ಟ ಉಂಟಾಗುತ್ತಿದೆಯೆಂದು ಅಲ್ಲದೆ ಯಾಂತ್ರಿಕ ಉಪಕರಣಗಳನ್ನು ಬಳಸುತ್ತಿರುವುದರಿಂದ ನದಿಯ ಪಾತ್ರದಲ್ಲಿ ಅನೇಕ ದುಷ್ಪರಿಣಾಮಗಳು ಉಂಟಾಗುತ್ತವೆ ಎಂದು ಪರಿಸರದ ಮೇಲೆ ಪರಿಣಾಮ ಬೀರುತ್ತದೆ ಎಂದು, ಜಲ ಚರಗಳ ಮೇಲೂ ಪರಿಣಾಮ ಉಂಟಾಗುತ್ತದೆ ಎಂದು ಅಲ್ಲದೆ ಖಾಸಗಿ ವ್ಯಕ್ತಿಗಳ ಜಮೀನುಗಳ ಮೇಲೆ, ಮರಳು ಲಾರಿಗಳು ತಿರುಗಾಡುವುದರಿಂದ ಸದರಿ ಜಮೀನುಗಳಿಗೆ ಧಕ್ಕೆಯಾಗುವುದರ ಜೊತೆಗೆ ಬೆಳೆಗಳು ಕೂಡ ಹಾನಿಯಾಗಿವೆ ಎಂದು, ಅಲ್ಲದೆ ಮಣ್ಣಿನ ರಸ್ತೆಗಳು ತಿರುಗಾಡಲಾಗದಷ್ಟು ಹಾನಿಗೊಳಗಾಗಿವೆ ಎಂದು ಬರೆದಿರುವುದನ್ನು ಗಮನಿಸಲಾಗಿದೆ.

ಈ ಬಾಬ್ತು ಮಾನ್ಯ ಜಿಲ್ಲಾಧಿಕಾರಿಗಳವರು ಪತ್ರವನ್ನು ಬರೆದು ಅಗತ್ಯ ಕ್ರಮ ಕೈಗೊಳ್ಳುವಂತೆ ಉಲ್ಲೇಖ (2)ರ ಪತ್ರದಲ್ಲಿ ಹೇಳಿರುವುದನ್ನು ಗಮನಿಸಲಾಗಿದೆ.

ಇದೂ ಅಲ್ಲದೆ ಪತ್ರಿಕಾ ಮಾಧ್ಯಮದವರು ಪತ್ರಿಕೆಗಳಲ್ಲಿ ವರದಿ ಮಾಡುತ್ತಾ ಅಕ್ರಮ ಮರಳು ತೆಗೆದು ಸಾಗಣೆ ಮಾಡುತ್ತಿರುವುದರಿಂದ, ಪರಿಸರದ ಮೇಲೆ ಆಗುವ ದುಷ್ಪರಿಣಾಮ ಮತ್ತು ನದಿಯ ನೀರು ಕಲುಷಿತವಾಗಿ ಈ ನೀರನ್ನು ಪಟ್ಟಣದ, ಗ್ರಾಮಗಳ, ಜನರು ಕುಡಿಯುವುದರಿಂದ ಆರೋಗ್ಯದ ಮೇಲೆ ಆಗುವ ಪರಿಣಾಮವನ್ನು ಮತ್ತು ಹೆಚ್ಚಿನ ಭಾರ ತುಂಬಿ ಮರಳನ್ನು ಸಾಗಣೆ ಮಾಡುವುದರಿಂದ ರಸ್ತೆಗಳು ಹಾಳಾಗಿರುವುದನ್ನು, ಈ ಬಾಬ್ತು ಸಾರ್ವಜನಿಕರು ಆಕ್ಷೇಪಣೆ ಮಾಡುತ್ತಿರುವುದನ್ನು ಗಮನಿಸಲಾಗಿದೆ. ಈ ಹಿಂದೆ ನೀಡಿದ ಸೂಚನೆಗಳು ಉಲ್ಲಂಘನೆಯಾಗಿರುವುದನ್ನು ಪರಿಶೀಲಿಸಲಾಗಿದೆ.

ಅನೇಕ ಪರಿಸರವಾದಿಗಳು ಈ ಮರಳು ತೆಗೆಯುವುದು, ಸಾಗಣೆ ಮಾಡುವುದನ್ನು ವಿರೋಧಿಸಿ, ಅಧಿಕಾರಿಗಳ ಮೇಲೆ ಜನಪ್ರತಿನಿಧಿಗಳ ಮೇಲೆ ಸಲ್ಲದ ಆರೋಪ ಮಾಡಿರುವುದನ್ನು ಗಮನಿಸಲಾಗಿದೆ.

ರಸ್ತೆಗಳು ಹಾಳಾಗಿರುವುದರಿಂದ, ವಾಹನಗಳ ಚಾಲನೆಗೆ ತೊಂದರೆಯಾಗಿರುವುದು, ದ್ವಿಚಕ್ರ ವಾಹನದವರು ಬಿದ್ದು ಅಪಘಾತಕ್ಕೊಳಗಾಗಿರುವುದು ಇತರೆ ವಾಹನಗಳು ಅಪಘಾತವಾಗಿರುವುದನ್ನು ಗಮನಿಸಲಾಗಿದೆ.

ಮೇಲಿನ ಅಂಶಗಳನ್ನು ಆಧರಿಸಿ ಸಾರ್ವಜನಿಕರು ಈ ಬಾಬ್ತು ದೂರು ಮಾಡಿರುವುದನ್ನು ಗಣನೆಗೆ ತೆಗೆದುಕೊಳ್ಳಲಾಗಿದೆ.

ಉಲ್ಲೇಖದ (1)ರ ಪತ್ರದ ರೀತ್ಯಾ ಹಿರಿಯ ಭೂ ವಿಜ್ಞಾನಿಗಳು, ಹಾಸನ ರವರು ಅಕ್ರಮ ಮರಳು ಸಾಗಾಣಿಕೆ ಮಾಡುತ್ತಿರುವ ಅಂಶವನ್ನು ವಿವರಿಸುತ್ತಾ ಇದನ್ನು ತಡೆಗಟ್ಟಲು ವಿಶೇಷ ಕಾರ್ಯಪಡೆಯನ್ನು ರಚಿಸುವಂತೆ ಕೇಳಿಕೊಂಡಿರುತ್ತಾರೆ. ಅದರಂತೆ ದಿನಾಂಕ:12.04.2005ರಂದು ಮಾನ್ಯ ಉಪವಿಭಾಗಾಧಿಕಾರಿಗಳು, ಹಾಸನ ರವರ ಅಧ್ಯಕ್ಷತೆಯಲ್ಲಿ ಹಿರಿಯ ಭೂ ವಿಜ್ಞಾನಿಗಳು, ಹಾಸನ, ಆರಕ್ಷಕ ಉಪ ಅಧೀಕ್ಷಕರು, ಹೊಳೆನರಸೀಪುರ, ಸಾರಿಗೆ ಅಧಿಕಾರಿಗಳು ಹಾಸನ ಜಿಲ್ಲೆ, ತಹಸೀಲ್ದಾರ್ ಹಾಸನ ತಾಲ್ಲೂಕು, ತಹಸೀಲ್ದಾರ್, ಹೊಳೆನರಸೀಪುರ ತಾಲ್ಲೂಕು ರವರುಗಳು ಕೂಡಿ ಚರ್ಚಿಸಿದಂತೆ ಅಕ್ರಮ ಮರಳು ಸಾಗಾಣಿಕೆಯಿಂದ ಇನ್ನು ಮುಂದೆಯೂ ಸಾರ್ವಜನಿಕ ನೆಮ್ಮದಿ ಮತ್ತು ಆಸ್ತಿಗೆ ಭಂಗ ಉಂಟಾಗುವ ಸಾಧ್ಯತೆ ಇರುವುದರಿಂದ ಮತ್ತು ಸಾರ್ವಜನಿಕ ಶಾಂತಿ ಮತ್ತು ಸುರಕ್ಷತೆ ಕಾಪಾಡುವ ದೃಷ್ಟಿಯಿಂದ ಮತ್ತು ಸರ್ಕಾರದ ಖನಿಜ ಸಂಪತ್ತು ಅನಧಿಕೃತವಾಗಿ ಲೂಟಿ ಮಾಡುವ ಸಂಭವ ಇದೆಯೆಂದು ಮನದಟ್ಟಾಗಿರುವುದರಿಂದ ಮೇಲ್ಕಂಡ ಅಕ್ರಮ ಚಟುವಟಿಕೆಗಳನ್ನು ತಡೆಗಟ್ಟಲು ಹಿರಿಯ ಭೂ ವಿಜ್ಞಾನಿಗಳು, ಹಾಸನ ರವರ ವರದಿಯನ್ನು ಗಣನೆಗೆ ತೆಗೆದುಕೊಳ್ಳಲಾಗಿದೆ ಹಾಗೂ ಮೇಲಿನ ಎಲ್ಲಾ ಅಂಶಗಳನ್ನು ಗಮನಿಸಿ ಹೊಳೆನರಸೀಪುರ ತಾಲ್ಲೂಕು ಹಳೇಕೋಟೆ ಹೋಬಳಿ ಹನುಮನಹಳ್ಳಿ ಗ್ರಾಮದಿಂದ ಕಸಬಾ ಹೋಬಳಿ ವಳಂಬಿಗೆ ಗ್ರಾಮದವರೆಗೂ ಹೇಮಾವತಿ ನದಿಯ ಪಾತ್ರದ ಇಕ್ಕೆಲಗಳಲ್ಲಿ ನದಿಯಿಂದ ಹೊರಗಡೆ ಮರಳು ತೆಗೆಯುವುದನ್ನು ಮತ್ತು ಸಾಗಾಣಿಕೆ ಮಾಡುವುದನ್ನು ನಿಷೇಧಿಸಿ ಸಿ.ಆರ್.ಪಿ.ಸಿ. ಕಲಂ 144ರಂತೆ ನಿಷೇದಾಜ್ಞೆಯನ್ನು ಹೊರಡಿಸುವುದು ಸಾರ್ವಜನಿಕ ಹಿತದೃಷ್ಟಿಯಿಂದ ಒಳಿತು ಎಂದು ಮನಗಂಡು ಈ ಆದೇಶವನ್ನು ಹೊರಡಿಸಿದೆ.

**ಆದೇಶ ಸಂಖ್ಯೆ: ನಂ.ಎಂ.ಎ.ಜಿ.61:04-05, ದಿನಾಂಕ: 15ನೇ ಏಪ್ರಿಲ್, 2005**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳಿಂದಾಗಿ ಶ್ರೀ ಕಾಡಯ್ಯ, ಕೆ.ಎ.ಎಸ್. ತಾಲ್ಲೂಕು ಕಾರ್ಯನಿರ್ವಾಹಕ ದಂಡಾಧಿಕಾರಿ, ಹೊಳೆನರಸೀಪುರ ತಾಲ್ಲೂಕು, ಹೊಳೆನರಸೀಪುರ ಆದ ನಾನು ಭಾರತೀಯ ದಂಡ ಪ್ರಕ್ರಿಯೆ ಸಂಹಿತೆ ಕಲಂ 144 ರಂತೆ ನನಗೆ ಪ್ರದತ್ತವಾಗಿರುವ ಅಧಿಕಾರವನ್ನು ಉಪಯೋಗಿಸಿ ದಿನಾಂಕ: 16.04.2005ರ ಬೆಳಿಗ್ಗೆ 8-00 ಗಂಟೆಯಿಂದ ದಿನಾಂಕ: 30.04.2005ರ ಮಧ್ಯರಾತ್ರಿ 12-00 ಗಂಟೆಯವರೆಗೆ ಈ ಕೆಳಕಂಡಂತೆ ಪ್ರತಿಬಂಧಕಾಜ್ಞೆಯನ್ನು ವಿಧಿಸಿರುತ್ತೇನೆ.

2) ಪೂರ್ವಾನುಮತಿ ಪಡೆಯದೆ ನದಿಯ ಪಾತ್ರದಲ್ಲಿ (ಅಧಿಕೃತ ಪರವಾನಗಿದಾರರನ್ನು ಬಿಟ್ಟು) ಅಂದರೆ ಪ್ರಸ್ತಾವನೆಯಲ್ಲಿ ಹೇಳಿರುವ ಪ್ರದೇಶದಲ್ಲಿ ಅಂದರೆ ಹಳೇಕೋಟೆ ಹೋಬಳಿ ಹನುಮನಹಳ್ಳಿ ಗ್ರಾಮದಿಂದ ಕಸಬಾ ಹೋಬಳಿ ವಳಂಬಿಗೆ ಗ್ರಾಮದವರೆಗೆ ನದಿಯ ಪಾತ್ರದ ಎರಡೂ ಕಡೆಗಳಲ್ಲಿ ಅನಧಿಕೃತವಾಗಿ ಮರಳು ತೆಗೆಯುವುದು ಮತ್ತು ಸಾಗಣೆ ಮಾಡುವುದನ್ನು ನಿಷೇಧಿಸಲಾಗಿದೆ.

3) ನದಿಯಲ್ಲಿ ಹಾನಿಕಾರಕವಾದ ಯಂತ್ರೋಪಕರಣಗಳನ್ನು ಬಳಸಿ ಮರಳು ತೆಗೆಯಲು ಪ್ರಯತ್ನ ನಡೆಸುವುದು, ನದಿ ನೀರನ್ನು ಕಲುಷಿತಗೊಳಿಸುವುದು ಮತ್ತು ಅಕ್ರಮವಾಗಿ ಮರಳನ್ನು ಸಾಗಾಣಿಕೆ ಮಾಡುವುದು ನಿಷೇಧಿಸಿದೆ.

4) ಈ ವಿಚಾರದಲ್ಲಿ ಸಾರ್ವಜನಿಕ ನೆಮ್ಮದಿಗೆ ಭಂಗ ತರುವಂತೆ ಅಥವಾ ಅಶಾಂತಿಗೆ ಪ್ರೇರೇಪಿಸುವಂತೆ ತಿಳಿಸುವುದನ್ನು ನಿಷೇಧಿಸಿದೆ.

5) ಸಾರ್ವಜನಿಕ ನೈತಿಕತೆಗೆ ಭಂಗ ತರುವ ಅಥವಾ ಅಶಾಂತಿಗೆ ಪ್ರೇರೇಪಿಸುವಂತೆ ಕಿರುಚುವುದು, ಹಾಡುವುದು, ವಾದ್ಯವನ್ನು ಬಾರಿಸುವುದು, ಸಂಜ್ಞೆಗಳನ್ನು ಮಾಡುವುದು ಮತ್ತು ಚಿಹ್ನೆಗಳನ್ನು ತೋರಿಸುವುದನ್ನು ನಿಷೇಧಿಸಿದೆ.

6) 5 ಜನ ಅಥವಾ ಅದಕ್ಕಿಂತ ಹೆಚ್ಚು ಗುಂಪು ಸೇರುವುದನ್ನು ಅಥವಾ ಒಟ್ಟಿಗೆ ಗುಂಪುಗೂಡಿ ಹೋಗುವುದನ್ನು ನಿಷೇಧಿಸಲಾಗಿದೆ.

7) ಅಘಾತಕಾರಿ ಶಸ್ತ್ರಾಸ್ತ್ರಗಳನ್ನು ಹೊತ್ತು ತಿರುಗುವುದು ನಿಷೇಧಿಸಲಾಗಿದೆ.

ಯಾರಾದರೂ ಮೇಲ್ಕಂಡ ಅಥವಾ ಮೇಲೆ ತಿಳಿಸಿದ ನದಿ ಪಾತ್ರದಲ್ಲಿ ಮರಳು ತೆಗೆಯುವುದು ಮತ್ತು ಮೇಲೆ ಹೇಳಿದ ವಸ್ತುಗಳನ್ನು ಹೊಂದಿದ್ದಲ್ಲಿ ಆರಕ್ಷಕ ಸಿಬ್ಬಂದಿಯು ಅವರನ್ನು ನಿಶ್ಯಸ್ತ್ರಗೊಳಿಸಿ ಅದನ್ನು ಪಡೆದು ಮುಟ್ಟುಗೋಲು ಹಾಕಿಕೊಳ್ಳುವುದು.

ತಾಲ್ಲೂಕಿನಲ್ಲಿ ಯಾವುದೇ ಅಹಿತಕರ ಘಟನೆ ನಡೆಯದಂತೆ ಸೂಕ್ತ ಬಿಗಿ ಬಂದೋಬಸ್ತ್ ಮಾಡಲು ಆರಕ್ಷಕ ಇಲಾಖೆಯವರಿಗೆ ಆದೇಶಿಸಲಾಗಿದೆ.

ಈ ತಾಲ್ಲೂಕಿನಲ್ಲಿ ನಡೆಯುವ ಯಾವುದೇ ಚುನಾವಣೆ ಮತ್ತು ನದಿ ದಂಡೆಯಲ್ಲಿ ನಡೆಯುವ ಶವ ಸಂಸ್ಕಾರ, ಧಾರ್ಮಿಕ ಕಾರ್ಯಗಳಿಗೆ ಈ ಆದೇಶ ಅನ್ವಯವಾಗುವುದಿಲ್ಲ. ಈ ಆದೇಶವನ್ನು ಮುಖ್ಯ ಸ್ಥಳಗಳಲ್ಲಿ ಅಂಟಿಸುವುದರ ಮೂಲಕ ಪ್ರಚುರಪಡಿಸತಕ್ಕದ್ದು.

ಈ ದಿನ ದಿನಾಂಕ: 15.04.2005ರಂದು ನನ್ನ ಸ್ವಹಸ್ತದಿಂದ ಸಹಿ ಮಾಡಿ ಮೊಹರು ಹಾಕಿದೆ.

ತಾಲ್ಲೂಕು ದಂಡಾಧಿಕಾರಿ,
ಹೊಳೆನರಸೀಪುರ ತಾಲ್ಲೂಕು.

ಪಿ.ಆರ್.678

## ADDITIONAL DIRECTOR (PD), FOOD, CIVIL SUPPLIES AND CONSUMER AFFAIRS DEPARTMENT, BANGALORE

## NOTIFICATION

**No. AD:DFG:PTL:2:2005-06, Bangalore, Dated: 8th April, 2005**

**Sub:** Revision of issue of SKO in Bangalore Informal Rationing Area w.e.f. 01.04.2005.

Consequent on the increase in the basic issue price and Vat fixed by State Govt. SKO under Public Distribution System by the Government of India, I, Abdul Bari Nawab, IAS, Additional Director for Food, Civil Supplies and Consumer Affairs Department, Bangalore in exercise of the powers conferred under kerosene (restriction on use and fixation of ceiling price) order 1993, do hereby declare that the following are the maximum prices at which the Kerosene Oil is to be sold by wholesale and retail dealers under Public Distribution System in Bangalore (IR) area w.e.f. 01.04.2005.

1) Wholesale Issue price of SKO per KL Rs. 8988.00
2) Retail Issue price of SKO per Litre Rs. 9.30

The sale of SKO in excess of the above declared price is an offence and is punishable under the provisions of the Essential commodities Act 1955, Detailed costing sheet is enclosed in Annexure I to the Notification.

Additional Director (PD),
Food, Civil Supplies and Consumer
Affairs Department, Bangalore.

**ಸಾರ್ವಜನಿಕ ವಿತರಣಾ ಪದ್ಧತಿಯಡಿ ವಿತರಿಸಲಾಗುವ ಸೀಮೆಎಣ್ಣೆ ದರಪಟ್ಟಿ**
**(1/4/2005 ರಿಂದ ವ್ಯಾಟ್ ಸೇರಿದಂತೆ ಬೆಂಗಳೂರು ಅನೌಪಚಾರಿಕ ಪಡಿತರ ಪ್ರದೇಶಕ್ಕೆ ಜಾರಿಯಾದ ದರಪಟ್ಟಿ)**

| ಕ್ರ.ಸಂ. | ವಿವರಗಳು | ಬೆಂಗಳೂರು (ಅಪ) (ಪ್ರತಿ ಕೆ.ಎಲ್.ಗೆ) |
|---|---|---|
| 1 | 2 | 3 |
| 1. | ಎಕ್ಸ್‌ಟರ್ಮಿನಲ್ ದರ | 8227.32 |
| 2. | ಸಮೌಲ್ಯ (VAT) ತೆರಿಗೆ @ 4% | 329.09 |
| 3. | ಟರ್ಮಿನಲ್ ವಿತರಣಾ ದರ | 8556.41 |
| 4. | ಸಾಗಾಣಿಕೆ ದರ | 191.56 |
| 5. | ಸಗಟು ವಹಿವಾಟುದಾರರ ಕಮೀಷನ್* | 204.36 |
| 6. | ನ್ಯಾಯಬೆಲೆ ಅಂಗಡಿಗೆ ಸೀಮೆಎಣ್ಣೆ ವಿತರಿಸುವ ಸಾಗಾಣಿಕೆ ದರ | 0.00 |
| 7. | ಸಮೌಲ್ಯ (VAT) ತೆರಿಗೆ @ 4%<br>8227.32+191.56+204.36x4%-(344.92+329.09) | 15.83 |
| 8. | ಸಗಟು ಬೆಲೆ | 8968.16 |
| 9. | ಸರ್ಕಾರಕ್ಕೆ ನೀಡಬೇಕಾದ ವ್ಯತ್ಯಾಸ ದರ ಪ್ರತಿ ಕೆ.ಎಲ್‌ಗೆ | 19.84 |
| 10. | ಸಗಟು ವಿತರಣಾ ಬೆಲೆ ಪ್ರತಿ ಕೆ.ಎಲ್‌ಗೆ | 8988.00 |
| 11. | ಚಿಲ್ಲರೆ ಮಾರಾಟಗಾರರ ಕಮೀಷನ್ ಪ್ರತಿ ಕೆ.ಎಲ್.ಗೆ | 300.00 |
| 12. | ಸಮೌಲ್ಯ (VAT) ತೆರಿಗೆ @ 4%<br>8227.32+191.56+204.36x4%-(356.92+344.92) | 12.00 |
| 13. | ಚಿಲ್ಲರೆ ಮಾರಾಟ ದರ ಪ್ರತಿ ಕೆ.ಎಲ್‌ಗೆ | 9300.00 |
| 14. | ಚಿಲ್ಲರೆ ಮಾರಾಟ ದರ ಲೀಟರ್‌ಗೆ | 9.30 |

*ಭಾರತ ಸರ್ಕಾರದ ಪತ್ರ ಸಂಖ್ಯೆ:P-20028/2/200pp DTD 4/6/2002 ರಂತೆ ಈ ಕಛೇರಿ ಪತ್ರ ಸಂಖ್ಯೆ:CFS:PD:PTL:09/2002-03 dtd:25/7/2002 ನಲ್ಲಿ ತಿಳಿಸಿರುವಂತೆ ಫಾರ್ಮ XIII ವಹಿವಾಟುದಾರರಿಗೆ ನೀಡುವ ಎಲ್ಲಾ ಘಟಕ ವೆಚ್ಚಗಳು ಇದರಲ್ಲಿ ಒಳಗೊಂಡಿರುತ್ತದೆ.

ಅಪರ ನಿರ್ದೇಶಕರು (ಸಂ.ವಿ),
ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ
ವ್ಯವಹಾರಗಳ ಇಲಾಖೆ, ಬೆಂಗಳೂರು.

ಪಿ.ಆರ್.679

## ಸಹಕಾರ ಇಲಾಖೆ

**ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತಿಪಟೂರು ಉಪವಿಭಾಗ, ತಿಪಟೂರು ಇವರ ಕಾರ್ಯಾಲಯದ ನಡವಳಿಕೆಗಳು**

**ಅಧಿಭಾರ ಅರ್ಜಿ ಸಂಖ್ಯೆ: 3: 2004-2005**

**ಅರ್ಜಿದಾರರು:**
ವ್ಯವಸ್ಥಾಪಕರು,
ಪ್ರಾಥಮಿಕ ಕೃಷಿ ಸಹಕಾರ ಬ್ಯಾಂಕ್(ನಿ)
ತಂಡಗ, ತುರುವೇಕೆರೆ ತಾಲ್ಲೂಕು.

**ಎದುರು ಅರ್ಜಿದಾರರು:**
ಲೇಟ್ ನಂಜಪ್ಪ
ಮಾಜಿ ಕಾರ್ಯದರ್ಶಿ,
ಪ್ರಾಥಮಿಕ ಕೃಷಿ ಸಹಕಾರಿ ಬ್ಯಾಂಕ್(ನಿ), ತಂಡಗ,
ತುರುವೇಕೆರೆ ತಾಲ್ಲೂಕು.

**ವಾರಸುದಾರರು:**

1. ಶ್ರೀಮತಿ ಲೀಲಾ ಕೋಂ ಲೇಟ್ ನಂಜಪ್ಪ
ಬಾವಿಕೇರಿ ಮಸೀದಿ ಹಿಂಭಾಗ, ತುರುವೇಕೆರೆ ಟೌನ್, ತುರುವೇಕೆರೆ.
2. ಅರುಣ್‌ಕುಮಾರ್ ಬಿನ್ ಲೇಟ್ ನಂಜಪ್ಪ
ಬಾವಿಕೇರಿ ಮಸೀದಿ ಹಿಂಭಾಗ, ತುರುವೇಕೆರೆ ಟೌನ್, ತುರುವೇಕೆರೆ.
3. ಅಶೋಕ್ ಬಿನ್ ಲೇಟ್ ನಂಜಪ್ಪ
ಬಾವಿಕೇರಿ ಮಸೀದಿ ಹಿಂಭಾಗ, ತುರುವೇಕೆರೆ ಟೌನ್, ತುರುವೇಕೆರೆ.

ಕರ್ನಾಟಕ ಸಹಕಾರಿ ಸಂಘಗಳ ಕಾಯಿದೆ 1959 ರ ಕಲಂ 103ರ ಮೇರೆಗೆ ಹೊರಡಿಸಿದ ತೀರ್ಪು ಮುನ್ನ ಜಪ್ತಿ ಆಜ್ಞೆ:

**ಪ್ರಸ್ತಾವನೆ:**

ಪ್ರಾಥಮಿಕ ಕೃಷಿ ಸಹಕಾರ ಬ್ಯಾಂಕ್(ನಿ) ತಂಡಗ, ತುರುವೇಕೆರೆ ತಾಲ್ಲೂಕು ಈ ಬ್ಯಾಂಕ್‌ನಲ್ಲಿ ಶ್ರೀ ನಂಜಪ್ಪ, ವ್ಯವಸ್ಥಾಪಕರಾಗಿ ಕಾರ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ನಗದು ಮತ್ತು ದಾಸ್ತಾನು ರೂಪದಲ್ಲಿ ರೂ.232959-04 ಗಳನ್ನು ದುರುಪಯೋಗ ಪಡಿಸಿಕೊಂಡಿರುವುದು ಬ್ಯಾಂಕ್‌ನ 2002-2003ನೇ ಸಾಲಿನ ಲೆಕ್ಕ ಪರಿಶೋಧನಾ ವರದಿಯಲ್ಲಿ ಬೆಳಕಿಗೆ ಬಂದಿದ್ದು ಸದರಿಯವರು ದುರುಪಯೋಗ ಪಡಿಸಿಕೊಂಡಿರುವ ಹಣವನ್ನು ಬ್ಯಾಂಕ್‌ಗೆ ಮರು ಪಾವತಿಸುವ ಮುನ್ನ ಮರಣ ಹೊಂದಿದ ಪ್ರಯುಕ್ತ ಬ್ಯಾಂಕ್‌ನ ವ್ಯವಸ್ಥಾಪಕರು ದುರುಪಯೋಗ ಹಣದ ವಸೂಲಾತಿಗಾಗಿ ಶ್ರೀ ಲೇಟ್ ನಂಜಪ್ಪನವರ ವಾರಸುದಾರರ ಹೆಂಡತಿಯಾದ ಶ್ರೀಮತಿ ಲೀಲಾ ಮತ್ತು ಮಕ್ಕಳಾದ ಅರುಣ್‌ಕುಮಾರ್ ಮತ್ತು ಅಶೋಕ್ ಇವರುಗಳನ್ನು ವಾರಸುದಾರರನ್ನಾಗಿ ಮಾಡಿ ಬ್ಯಾಂಕ್‌ನಲ್ಲಿ ದುರುಪಯೋಗವಾಗಿರುವ ಹಣದ ವಸೂಲಾತಿಗಾಗಿ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 69ರ ಅಡಿಯಲ್ಲಿ ಅಧಿಭಾರ ಅರ್ಜಿ ದಾಖಲು ಮಾಡಿದ್ದು ಪ್ರಕರಣದ ವಿಚಾರಣೆ ನಡೆಯುತ್ತಿರುತ್ತದೆ.

ದುರುಪಯೋಗ ಮೊತ್ತಕ್ಕೆ ತಕ್ಕ ಮೌಲ್ಯದ ಎದುರು ಅರ್ಜಿದಾರರುಗಳ ಸ್ಥಿರಾಸ್ತಿಯನ್ನು ತೀರ್ಪು ಮುನ್ನ ನ್ಯಾಯಾಲಯದ ವ್ಯಾಪ್ತಿಗೆ ಒಳಪಡಿಸಿ ಜಪ್ತಿಗೊಳಿಸುವಂತೆ ಬ್ಯಾಂಕ್‌ನ ವ್ಯವಸ್ಥಾಪಕರು ಮನವಿ ಸಲ್ಲಿಸಿದ್ದರ ಮೇರೆಗೆ ಬ್ಯಾಂಕ್‌ನ ಹಿತದೃಷ್ಟಿಯಿಂದ ಭದ್ರತೆಗಾಗಿ ಎದುರು ಅರ್ಜಿದಾರರ ಅವಿಭಾಜ್ಯ ಕುಟುಂಬದ ಈ ಕೆಳಕಂಡ ಸ್ಥಿರಾಸ್ತಿಯನ್ನು ಷರತ್ತು ಸಹಿತ ತೀರ್ಪು ಮುನ್ನ ಜಪ್ತಿ ಆಜ್ಞೆಯನ್ನು ದಿನಾಂಕ: 31.01.2005ರಂದು ಆದೇಶ ಹೊರಡಿಸಿ ಎದುರು ಅರ್ಜಿದಾರರುಗಳಿಗೆ ನಿಗದಿತ ಅವಧಿಯೊಳಗೆ ಷರತ್ತು ಪೂರೈಸಲು ಸೂಚಿಸಲಾಗಿತ್ತು. ಅದರಂತೆ ಎದುರು ಅರ್ಜಿದಾರರು ಷರತ್ತು ಪೂರೈಸಲು ವಿಫಲರಾಗಿದ್ದರಿಂದ ಜಪ್ತಿ ಆಜ್ಞೆಯನ್ನು ಸ್ಥಿರೀಕರಿಸುವುದು ಅಗತ್ಯವೆಂದು ಮನಗಂಡು ಸ್ಥಿರೀಕರಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ ನಂ.ಸನಿ-34:ಡಿಡಿಎನ್:ಕಲಂ 103:91:2004-2005, ದಿನಾಂಕ: 14ನೇ ಮಾರ್ಚ್, 2005**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತಿಪಟೂರು ಉಪವಿಭಾಗ, ತಿಪಟೂರು ಆದ ನಾನು ಸಹಕಾರ ಸಂಘಗಳ ಕಾಯಿದೆ ಕಲಂ 103 ರನ್ವಯ ಮತ್ತು ಸರ್ಕಾರದ ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯೂ:69:ಸಿಎಲ್ಎಂ:2001 ದಿನಾಂಕ: 21.11.2001ರ ಪ್ರಕಾರ ದತ್ತವಾಗಿರುವ ಅಧಿಕಾರ ಉಪಯೋಗಿಸುತ್ತಾ ಈ ಕೆಳಗೆ ಕಾಣಿಸಿರುವ ಎದುರು ಅರ್ಜಿದಾರರ ಕುಟುಂಬದ ಸ್ಥಿರಾಸ್ತಿಯನ್ನು ದಿನಾಂಕ: 31.01.2005 ರಂದು ಹೊರಡಿಸಿದ ಷರತ್ತು ಸಹಿತ ತೀರ್ಪು ಮುನ್ನ ಜಪ್ತಿ ಆಜ್ಞೆಯನ್ನು ಈ ಮೂಲಕ ಸ್ಥಿರೀಕರಿಸಲಾಗಿದೆ ಎಂದು ಆದೇಶಿಸಿದೆ.

ಈ ಕೆಳಕಂಡ ಸ್ಥಿರಾಸ್ತಿಗಳನ್ನು ಪಡೆಯುವ ಖರೀದಿಸುವ, ದಾನ ಪಡೆಯುವ ಅಥವಾ ಇನ್ನಾವುದೇ ರೀತಿ ವ್ಯಕ್ತಿ ಅಥವಾ ಸಂಸ್ಥೆಗಳು ಹೊಂದಿದರೆ ಸಿಂಧುವಾಗುವುದಿಲ್ಲವೆಂದು ಈ ಮೂಲಕ ಸಾರ್ವಜನಿಕರಲ್ಲಿ ತಿಳಿಯಪಡಿಸಿದೆ.

**ಜಪ್ತಿ ಆದೇಶಕ್ಕೆ ಒಳಗಾದ ಸ್ಥಿರಾಸ್ತಿ ವಿವರ**

| ಕ್ರ. ಸಂ. | ಹಕ್ಕುದಾರರ ಹೆಸರು | ಸ್ಥಿರಾಸ್ತಿ ಇರುವ ಗ್ರಾಮ | ಹೋಬಳಿ ತಾಲ್ಲೂಕು | ಸರ್ವೆ ನಂ. | ವಿಸ್ತೀರ್ಣ | ತರಹೆ |
|---|---|---|---|---|---|---|
| 1. | ಶ್ರೀಮತಿ ಲೀಲಾ ಕೋಂ ಲೇಟ್ ನಂಜಪ್ಪ | ಮಲ್ಲಾಘಟ್ಟ ಅಮಾನಿಕೆರೆ | ತುರುವೇಕೆರೆ ತಾಲ್ಲೂಕು | 2 ಹಿಸ್ಸಾ 2 | 0.0208 | ಭಾಗಾಯ್ತು |
| 2. | -"- | ಕೊಡಗೀಹಳ್ಳಿ | -"- | 23 ಹಿಸ್ಸಾ 5 | 0-9 | ಖುಷ್ಕಿ |
| 3. | -"- | ತುರುವೇಕೆರೆ ಗ್ರಾಮಾಂತರ | ತುರುವೇಕೆರೆ ತಾಲ್ಲೂಕು. | 204. ಹಿಸ್ಸಾ 3 | 1.03 | ಖುಷ್ಕಿ |
| 4. | -"- | ಕಸಬಾ ಟಿ ಹೊಸಹಳ್ಳಿ | ತುರುವೇಕೆರೆ ತಾ. | 15 ಹಿಸ್ಸಾ 7 | 0.27-08 | ಖುಷ್ಕಿ |
| 5. | -"- | ಕಸಬಾ ತುರುವೇಕೆರೆ | ತುರುವೇಕೆರೆ ತಾ. | 256 ಹಿಸ್ಸಾ 25 | 0.05 | ಭಾಗಾಯ್ತು |
| 6. | -"- | ಕಸಬಾ ತುರುವೇಕೆರೆ | ತುರುವೇಕೆರೆ ತಾ. | 256 ಹಿಸ್ಸಾ 10 | 0.07 | ಖುಷ್ಕಿ |
| 7. | -"- | ಮಲ್ಲಾಘಟ್ಟ ಅಮಾನಿಕೆರೆ | ತುರುವೇಕೆರೆ ತಾ. | 2 ಹಿಸ್ಸಾ 9 | 0.03 | ಭಾಗಾಯ್ತು |

ಈ ಆದೇಶವನ್ನು ನನ್ನ ಸಹಿ ಮತ್ತು ಕಛೇರಿಯ ಮುದ್ರೆಯೊಂದಿಗೆ ದಿನಾಂಕ:14.03.2005ರಂದು ನೀಡಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ತಿಪಟೂರು ಉಪ ವಿಭಾಗ, ತಿಪಟೂರು.

ಪಿ.ಆರ್.680

**ಕರ್ನಾಟಕ ಲೋಕ ಸೇವಾ ಆಯೋಗದ ನಡವಳಿಗಳು**

**ವಿಷಯ :** ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ದುರಾಚಾರ- ಅಭ್ಯರ್ಥಿತ್ವವನ್ನು ರದ್ದುಪಡಿಸುವ ಕುರಿತು ಆದೇಶ.

**ಪ್ರಸ್ತಾವನೆ:**

ಆಯೋಗವು ನಗರಾಭಿವೃದ್ಧಿ ಇಲಾಖೆಯ ಪರಿಸರ ಅಭಿಯಂತರರ 123 ಹುದ್ದೆಗಳಿಗೆ ದಿನಾಂಕ: 19.12.2004ರಂದು ಸ್ಪರ್ಧಾತ್ಮಕ ಪರೀಕ್ಷೆಯನ್ನು ನಡೆಸಿತು. ಸದರಿ ಪರೀಕ್ಷೆಗೆ ಅಭ್ಯರ್ಥಿಯಾದ ಕುಮಾರಿ ಮೇನಕ ಡಿ. ರವರು ದುರಾಚಾರ ಎಸಗಿ ಕರ್ನಾಟಕ ನಾಗರೀಕ ಸೇವೆಗಳು (ಸಾಮಾನ್ಯ ನೇಮಕಾತಿ) ನಿಯಮಗಳು, 1977ರ ನಿಯಮ-20ನ್ನು ಉಲ್ಲಂಘನೆ ಮಾಡಿರುವುದು ಆಯೋಗದ ಗಮನಕ್ಕೆ ಬಂದ ಕಾರಣ, ಆ ಅಭ್ಯರ್ಥಿಗೆ ಕಾರಣ ಕೇಳುವ ನೋಟೀಸ್‌ನ್ನು ಜಾರಿ ಮಾಡಲಾಯಿತು.

ಈ ಅಭ್ಯರ್ಥಿಯು (ನೋಂದಣಿ ಸಂಖ್ಯೆ 51312) ನೋಟೀಸಿಗೆ ಉತ್ತರ ನೀಡಿದ್ದು, ದಿನಾಂಕ: 19.12.2004ರ ಅಪರಾಹ್ನ ನಡೆದ ನಿರ್ದಿಷ್ಟ ಪತ್ರಿಕೆಯ ಉತ್ತರ ಪತ್ರಿಕೆಯನ್ನು ತೆಗೆದುಕೊಂಡು ಹೋಗಿದ್ದಕ್ಕೆ ಕ್ಷಮೆಯನ್ನು ಕೋರಿ, ಅದನ್ನು ಮರೆತು ತೆಗೆದುಕೊಂಡು ಹೋದೆನೆಂದು ಹಾಗೂ ದುರುದ್ದೇಶದಿಂದ ಆ ತಪ್ಪನ್ನು ಮಾಡಿಲ್ಲ ಎಂದು ತಿಳಿಸಿ ಸದರಿ ಉತ್ತರ ಪತ್ರಿಕೆಯನ್ನು ಮನವಿಯೊಂದಿಗೆ ಹಿಂದಿರುಗಿಸಿರುತ್ತಾರೆ. ವಿಚಾರಣಾಧಿಕಾರಿಗಳು ಈ ಅಭ್ಯರ್ಥಿಗೆ ಸದರಿ ಪರೀಕ್ಷೆಯ ಅಭ್ಯರ್ಥಿತ್ವವನ್ನು ರದ್ದುಪಡಿಸುವ ದಂಡನೆಯನ್ನು ವಿಧಿಸಲು ಆಯೋಗಕ್ಕೆ ಶಿಫಾರಸ್ಸು ಮಾಡಿದ್ದಾರೆ.

ಆಯೋಗವು ಮೇಲೆ ತಿಳಿಸಿರುವ ವರದಿಯನ್ನು ಕೂಲಂಕುಷವಾಗಿ ಪರಿಶೀಲಿಸಿ ಅದನ್ನು ಒಪ್ಪಿ ಕೆಳಕಂಡಂತೆ ಆದೇಶ ಮಾಡಿರುತ್ತದೆ.

**ಆದೇಶ ಸಂಖ್ಯೆ: ಆರ್(1) 10/05-06/ ಪಿಎಸ್‌ಸಿ, ಬೆಂಗಳೂರು, ದಿನಾಂಕ: 26ನೇ ಏಪ್ರಿಲ್, 2005**

ಕರ್ನಾಟಕ ಲೋಕಸೇವಾ ಆಯೋಗವು ಕರ್ನಾಟಕ ನಾಗರೀಕ ಸೇವೆಗಳು (ಸಾಮಾನ್ಯ ನೇಮಕಾತಿ) ನಿಯಮಗಳು 1977ರ ನಿಯಮಾನುಸಾರ ನಗರಾಭಿವೃದ್ಧಿ ಇಲಾಖೆಯ ಪರಿಸರ ಅಭಿಯಂತರರ 123 ಹುದ್ದೆಗಳಿಗೆ ದಿನಾಂಕ: 19.12.2004ರಂದು ನಡೆದ ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ನೋಂದಣಿ ಸಂಖ್ಯೆ: 51312 ಅಭ್ಯರ್ಥಿಯಾದ ಕುಮಾರಿ ಮೇನಕ ಡಿ. ರವರನ್ನು ಸದರಿ ಪರೀಕ್ಷೆಯಲ್ಲಿ ದುರಾಚಾರ ಎಸಗಿದ ಕಾರಣದಿಂದ ಅವರ ಅಭ್ಯರ್ಥಿತ್ವವನ್ನು ರದ್ದುಪಡಿಸಿದೆ.

ಆಯೋಗದ ಆದೇಶದ ಮೇರೆಗೆ,
**ಬಿ.ಎಸ್. ರಾಮಪ್ರಸಾದ್**
ಕಾರ್ಯದರ್ಶಿ,
ಕರ್ನಾಟಕ ಲೋಕಸೇವಾ ಆಯೋಗ.

ಪಿ.ಆರ್.681

**ಶಿಕ್ಷಣ ಇಲಾಖೆ**

**ಅಧಿಸೂಚನೆ**

**ಸಂಖ್ಯೆ: ಇಡಿ-107-ಡಿಸಿಇ-2001, ಬೆಂಗಳೂರು, ದಿನಾಂಕ: 18ನೇ ಏಪ್ರಿಲ್, 2005**

ಸಂಖ್ಯೆ: **ಇಡಿ 107 ಡಿಸಿಇ 2001 ದಿನಾಂಕ: 21.02.2005**ರಲ್ಲಿ ಹೊರಡಿಸಿದ ಅಧಿಸೂಚನೆಯನ್ನು ರದ್ದುಪಡಿಸಲಾಗಿದೆ. ಕರ್ನಾಟಕ ನಾಗರೀಕ ಸೇವೆಗಳು (ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಕ್ಕೆ ಸೇರಿದ ಅಭ್ಯರ್ಥಿಗಳಿಗೆ ಮೀಸಲಿರಿಸಿದ, ತುಂಬದೇ ಇರುವ ಸ್ಥಾನಗಳು) (ವಿಶೇಷ ನೇಮಕಾತಿ) ನಿಯಮಗಳು, 2001ನ್ನು ಓದಿಕೊಂಡಂತೆ, ಕರ್ನಾಟಕ ಲೋಕ ಸೇವಾ ಆಯೋಗದ ಮುಖಾಂತರ ಕರ್ನಾಟಕ ಶಿಕ್ಷಣ ಇಲಾಖಾ ಸೇವೆಗಳು (ಕಾಲೇಜು ಶಿಕ್ಷಣ ಇಲಾಖೆ) (ನೇಮಕಾತಿ) ತಿದ್ದುಪಡಿ ನಿಯಮಾವಳಿಗಳು, 2002ರ ನಿಯಮಗಳಡಿಯಲ್ಲಿ ಆಯ್ಕೆಯಾದ ಈ ಕೆಳಕಂಡ ಅಭ್ಯರ್ಥಿಗಳನ್ನು ಕಾಲೇಜು ಶಿಕ್ಷಣ ಇಲಾಖೆಯಲ್ಲಿ ರೂ.8000-275-13,500ರ ಯು.ಜಿ.ಸಿ. ವೇತನ ಶ್ರೇಣಿಯಲ್ಲಿ ಅವರುಗಳ ಹೆಸರಿನ ಮುಂದೆ ಸೂಚಿಸಲಾದ ಕಾಲೇಜಿನಲ್ಲಿ ಅರ್ಥಶಾಸ್ತ್ರ ವಿಷಯದ ಉಪನ್ಯಾಸಕರಾಗಿ 02 (ಎರಡು) ವರ್ಷ ಅವಧಿಯ ಪರಿವೀಕ್ಷಣೆಯ ಮೇರೆಗೆ ಕೂಡಲೇ ಜಾರಿಗೆ ಬರುವಂತೆ ನೇಮಕಾತಿ ಮಾಡಲಾಗಿದೆ.

**ವಿಷಯ: ಅರ್ಥಶಾಸ್ತ್ರ**

| ಕ್ರಮ ಸಂಖ್ಯೆ | ಹೆಸರು ಮತ್ತು ವಿಳಾಸ | ನೇಮಕಾತಿ ಮಾಡಲಾದ ಕಾಲೇಜು |
|---|---|---|
| 1. | ಶ್ರೀ ಬಲಿರಾಮ್,<br>ನಾರಾಯಣ್‌ಪುರ್ ಪೋಸ್ಟ್,<br>ಬಸವಕಲ್ಯಾಣ ತಾಲ್ಲೂಕು, ಬೀದರ್ ಜಿಲ್ಲೆ-585 348. | ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಕುದೂರು, ಬೆಂಗಳೂರು (ಗ್ರಾ) ಜಿಲ್ಲೆ. |

1) ಇವರ ನೇಮಕಾತಿಯು ತಾತ್ಕಾಲಿಕವಾಗಿದ್ದು, ಆಗಿಂದಾಗ್ಗೆ ಜಾರಿಯಲ್ಲಿರುವ ಸೇವಾ ಷರತ್ತುಗಳ ನಿಯಮ: ಆದೇಶಗಳ ಅಧೀನಕ್ಕೆ ಒಳಪಟ್ಟಿರುತ್ತದೆ.

2) ಇವರುಗಳ ನೇಮಕಾತಿಯು, ಮಹಿಳಾ ಮೀಸಲಾತಿ ಕುರಿತಂತೆ ಭಾರತದ ಸರ್ವೋಚ್ಚ ನ್ಯಾಯಾಲಯದಲ್ಲಿನ ರಿಟ್ ಅರ್ಜಿ (ಸಿವಿಲ್) ಸಂಖ್ಯೆ: 232/99ರ ಅಂತಿಮ ತೀರ್ಮಾನಕ್ಕೆ ಬದ್ಧವಾಗಿರುತ್ತದೆ.

3) ಇವರನ್ನು ಕೆಲಸಕ್ಕೆ ತೆಗೆದುಕೊಳ್ಳುವ ಮುನ್ನ ಅವರ ವಯಸ್ಸು, ವಿದ್ಯಾರ್ಹತೆಯ ಬಗ್ಗೆ ಮೂಲ ದಾಖಲೆಗಳೊಂದಿಗೆ ತಾಳೆ ನೋಡಿ ಪ್ರಸ್ತುತ ನೇಮಕಾತಿ ನಿಯಮಾನುಸಾರ ವಯೋಮಿತಿಯೊಳಗಿದ್ದಾರೆಯೇ ಹಾಗೂ ವಿದ್ಯಾರ್ಹತೆ ಹೊಂದಿರುವ ಬಗ್ಗೆ ಖಚಿತಪಡಿಸಿಕೊಳ್ಳತಕ್ಕದ್ದು.

4) ಇವರು ಪರಿವೀಕ್ಷಣಾ ಅವಧಿಯಲ್ಲಿ 1974ರ ಕರ್ನಾಟಕ ಸೇವಾ (ಸೇವಾ ಮತ್ತು ಕನ್ನಡ ಭಾಷೆ ಪರೀಕ್ಷೆಗಳು) ನಿಯಮಾವಳಿಯಲ್ಲಿ ನಿಗದಿಪಡಿಸಿರುವ ಕನ್ನಡ ಭಾಷಾ ಮತ್ತು ಇಲಾಖಾ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕೆಂಬ ಷರತ್ತನ್ನು ವಿಧಿಸಲಾಗಿದೆ ಹಾಗೂ ಪರೀಕ್ಷಾರ್ಥ ಅವಧಿಯಲ್ಲಿ ಯು.ಜಿ.ಸಿ. ಮಾರ್ಗಸೂಚಿಗಳನ್ವಯ ಅಲ್ಪಾವಧಿ ಓರಿಯೆಂಟೇಷನ್/ ರೆಫ್ರೆಷರ್ ಕೋರ್ಸ್‌ನಲ್ಲಿ ತರಬೇತಿ ಹೊಂದಿರತಕ್ಕದ್ದು ಮತ್ತು ಕರ್ತವ್ಯ ನಿರ್ವಹಣಾ ವರದಿಯು ತೃಪ್ತಿಕರವಿರತಕ್ಕದ್ದು.

5) ಇವರ ಸೇವಾ ಜ್ಯೇಷ್ಠತೆಯು ಪ್ರಸ್ತುತ ಕರ್ನಾಟಕ ಲೋಕಸೇವಾ ಆಯೋಗವು ಆಯಾಯ ವಿಷಯದಲ್ಲಿ ನಿರ್ಧರಿಸಿದಂತೆ ಇರತಕ್ಕದ್ದು. ಮುಂದೆ ಕರ್ನಾಟಕ ಲೋಕ ಸೇವಾ ಆಯೋಗವು ಕ್ರೋಢೀಕೃತ ಜ್ಯೇಷ್ಠತಾ ಪಟ್ಟಿಯನ್ನು ಸಿದ್ಧಪಡಿಸಿದಂತೆ ಹಾಗೂ ಸರ್ಕಾರದಿಂದ ಪುನಃ ಹೊರಡಿಸುವ ಅಧಿಸೂಚನೆಯಲ್ಲಿರುವಂತೆ ಪಾಲಿಸತಕ್ಕದ್ದು.

6) ಇವರು ನೇಮಕಾತಿ ಆದೇಶವನ್ನು ನೋಂದಾಯಿತ ಅಂಚೆ ಮೂಲಕ ಕಳುಹಿಸಿದ ದಿನಾಂಕದಿಂದ 15 (ಹದಿನೈದು) ದಿನಗಳೊಳಗೆ ಕೆಲಸಕ್ಕೆ ಸೇರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಮೇರಿ ಜಾಯ್ಸ್**

ಪಿ.ಆರ್.682

ಸರ್ಕಾರದ ಉಪ ಕಾರ್ಯದರ್ಶಿ,

ಶಿಕ್ಷಣ ಇಲಾಖೆ (ಉನ್ನತ ಶಿಕ್ಷಣ).

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ

## ಅಧಿಸೂಚನೆ

### ಸಂಖ್ಯೆ: ಸಿಆಸುಇ 75 ಆಸೇವ 2005, ಬೆಂಗಳೂರು, ದಿನಾಂಕ: 25ನೇ ಏಪ್ರಿಲ್, 2005

ಅಧಿಸೂಚನೆ ಸಂಖ್ಯೆ: ಸಿಆಸುಇ 75 ಆಸೇವ 2005 ದಿನಾಂಕ: 21.04.2005ರಲ್ಲಿ ವಿಶೇಷ ಭೂಸ್ವಾಧೀನಾಧಿಕಾರಿ, ಮಲಪ್ರಭಾ ಯೋಜನೆ, ಸವದತ್ತಿ, ಬೆಳಗಾಂ ಜಿಲ್ಲೆ ಹುದ್ದೆಯಲ್ಲಿ ಕಾರ್ಯ ನಿರ್ವಹಿಸುತ್ತಿರುವ ಕೆ.ಎ.ಎಸ್. (ಕಿರಿಯ ಶ್ರೇಣಿ) ಅಧಿಕಾರಿ, ಶ್ರೀ ಬಿ.ಎಫ್. ತಳವಾರ್ ಇವರನ್ನು ಉಪವಿಭಾಗಾಧಿಕಾರಿ, ಸಾಗರ ಉಪವಿಭಾಗ, ಸಾಗರ ಹುದ್ದೆಗೆ- ಡಾ: ಕೆ.ಹೆಚ್. ನರಸಿಂಹಮೂರ್ತಿ ಇವರ ಸ್ಥಾನದಲ್ಲಿ ವರ್ಗಾಯಿಸಿ ನೇಮಿಸಿರುವುದನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ತಡೆಹಿಡಿಯಲಾಗಿದೆ. ಹಾಗೂ ಡಾ: ಕೆ.ಹೆಚ್. ನರಸಿಂಹಮೂರ್ತಿ ಇವರನ್ನು ಉಪವಿಭಾಗಾಧಿಕಾರಿ, ಸಾಗರ ಹುದ್ದೆಯಲ್ಲಿ ಮುಂದುವರೆಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಪಿ.ಆರ್.684

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

## ಜಿಲ್ಲಾಧಿಕಾರಿಗಳ ಕಾರ್ಯಾಲಯ ಕೋಲಾರ ಜಿಲ್ಲೆ, ಕೋಲಾರ

## ಅಧಿಸೂಚನೆ

### ನಂ.ಎಲ್ಆರ್ಎಫ್ (ಕಲಂ 109) ಸಿಆರ್ 09: 2004-05, ದಿನಾಂಕ: 21ನೇ ಏಪ್ರಿಲ್, 2005

ಮುಳಬಾಗಿಲು ತಾಲ್ಲೂಕು, ಆವಣಿ ಹೋಬಳಿ, ವಿ. ಗುಟ್ಟಹಳ್ಳಿ ಗ್ರಾಮದ ಸ.ನಂ. 279/1ರ ಪೈಕಿ 1-00 ಎಕರೆ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ದಾನವಾಗಿ ಪಡೆಯಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109(1)ರಡಿಯಲ್ಲಿ ಅನುಮತಿಯನ್ನು ನೀಡಲು ಕೋರಿ Managing Trustee, ಜ್ಞಾನಜ್ಯೋತಿ ಎಜುಕೇಷನಲ್ ಟ್ರಸ್ಟ್, ಮುಳಬಾಗಿಲು ರವರು ನಮೂನೆ 15ಎ ರಲ್ಲಿ ಅರ್ಜಿಯನ್ನು ಅಗತ್ಯ ದಾಖಲೆಗಳೊಂದಿಗೆ ಸಲ್ಲಿಸಿರುವ ಸಂಬಂಧ ಮುಳಬಾಗಿಲು ತಾಲ್ಲೂಕು ತಹಶೀಲ್ದಾರ್ ರವರ ಪತ್ರದ ಸಂಖ್ಯೆ ಎಲ್ಆರ್ಎಫ್ ಸಿಆರ್ 23/2004-05 ದಿನಾಂಕ:01.04.2005ರಂತೆ ಕಡತ ತಯಾರಿಸಿ ಪ್ರಸ್ತಾವನೆಯನ್ನು ಸಲ್ಲಿಸಿದ್ದು ಸದರಿ ಪ್ರಸ್ತಾವನೆಯನ್ನು ಸಹಾಯಕ ಕಮೀಷನರ್ ಕೋಲಾರ ಉಪ ವಿಭಾಗ ರವರು ಪರಿಶೀಲಿಸಿ ಮೇಲ್ಕಂಡ ಜಮೀನನ್ನು ದಾನವಾಗಿ ಪಡೆಯಲು ಅರ್ಜಿದಾರರಿಗೆ ಅನುಮತಿಯನ್ನು ನೀಡಲು ಪತ್ರ ನಂ. ಎಲ್ಆರ್ಎಫ್. ಸಿಆರ್ 12/2004-05ರಂತೆ ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಲಾಗಿರುತ್ತೆ. ಪ್ರಸ್ತಾಪಿತ ಜಮೀನಿನ ಖಾತೆ ಶ್ರೀ ಜಿ. ಚಂದ್ರ ಬಿನ್ ಜಿ. ಅನಂತಪ್ಪ ಎಂಬುವವರ ಹೆಸರಿನಲ್ಲಿದ್ದು ಈ ಜಮೀನನ್ನು ಟ್ರಸ್ಟ್‌ಗೆ ದಾನವಾಗಿ ನೀಡಲು ಒಪ್ಪಿ ಕರಾರು ಪತ್ರವನ್ನು ಬರೆಸಿ ಕೊಟ್ಟಿರುತ್ತಾರೆ. ಮೇಲ್ಕಂಡ ಜಮೀನು ಭೂ ಮಂಜೂರಾತಿ ನಿಯಮಗಳು, ಕರ್ನಾಟಕ ಭೂ ಸುಧಾರಣೆ ಕಾಯ್ದೆ, ಇನಾಂ ರದ್ದಿಯಾತಿ ಕಾಯ್ದೆ ಮತ್ತು ಪಿ.ಟಿ.ಸಿ.ಎಲ್. ಕಾಯ್ದೆಗಳ ವ್ಯಾಪ್ತಿಗೆ ಒಳಪಟ್ಟಿರುವುದಿಲ್ಲ. ಮೇಲ್ಕಂಡ ಜಮೀನಿಗೆ ಸಂಬಂಧಿಸಿದಂತೆ ಯಾರೂ ಗೇಣಿ ಅರ್ಜಿಯನ್ನು ಸಲ್ಲಿಸಿರುವುದಿಲ್ಲ.

ಮೇಲ್ಕಂಡ ಟ್ರಸ್ಟ್ ಉಪ ನೋಂದಣಾಧಿಕಾರಿಗಳು ಮುಳಬಾಗಿಲು ರವರ ಕಛೇರಿಯಲ್ಲಿ ನಂ.3/2003-04 ದಿನಾಂಕ: 02.06.2003ರಂತೆ ನೋಂದಾವಣೆಯಾಗಿರುತ್ತೆ. ಟ್ರಸ್ಟ್‌ನವರ ವಿದ್ಯಾಸಂಸ್ಥೆ (ಜ್ಞಾನಜ್ಯೋತಿ ವಿದ್ಯಾಸಂಸ್ಥೆ, ಗುಟ್ಟಹಳ್ಳಿ, ಮುಳಬಾಗಿಲು ತಾಲ್ಲೂಕು) ಕ್ಷೇತ್ರ ಶಿಕ್ಷಣಾಧಿಕಾರಿಗಳು ಮುಳಬಾಗಿಲು ರವರ ಕಛೇರಿಯಲ್ಲಿ ನಂ.10/2004-05 ದಿನಾಂಕ: 17/02/ 2005ರಂತೆ ನೋಂದಾವಣೆಯಾಗಿ ಮಾನ್ಯತೆಯನ್ನು ಪಡೆದಿರುತ್ತೆ.

ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 (I) (II) ರಂತೆ ಶೈಕ್ಷಣಿಕ ಉದ್ದೇಶಕ್ಕಾಗಿ 4 ಯೂನಿಟ್‌ಗಳಿಗೆ ಮೀರದಂತೆ ಜಮೀನನ್ನು ಹೊಂದಲು ಅವಕಾಶವನ್ನು ಕಲ್ಪಿಸಿದ್ದು ಸರ್ಕಾರಿ ಅಧಿಸೂಚನೆ ಸಂಖ್ಯೆ ಸಂವ್ಯಶಾಇ 47 ಶಾಸನ 2001 ಬೆಂಗಳೂರು ದಿನಾಂಕ:23.04.2003ರಂತೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 (1)ಕ್ಕೆ ತಿದ್ದುಪಡಿಯನ್ನು ತಂದಿರುತ್ತೆ. (ಕರ್ನಾಟಕ ಭೂ ಸುಧಾರಣೆ ತಿದ್ದುಪಡಿ ಕಾಯ್ದೆ 2002) ಇದರಂತೆ ಶೈಕ್ಷಣಿಕ ಉದ್ದೇಶಕ್ಕಾಗಿ 2 ಯೂನಿಟ್‌ಗಳಿಗೆ ಮೀರದಂತೆ ಜಮೀನನ್ನು ಕ್ರಯಕ್ಕೆ ಪಡೆಯಲು/ ದಾನವಾಗಿ ಪಡೆಯಲು ಅನುಮತಿ/ ವಿನಾಯ್ತಿಯನ್ನು ನೀಡುವ ಅಧಿಕಾರವನ್ನು ಜಿಲ್ಲಾಧಿಕಾರಿಗಳಿಗೆ ನೀಡಿರುತ್ತೆ. ಇದರಂತೆ ಈ ಪ್ರಸ್ತಾವನೆಯು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 (I) (II) ಕ್ಕೆ ಅನುಗುಣವಾಗಿರುತ್ತೆ. ಮೇಲ್ಕಂಡ ಅಂಶಗಳಡಿಯಲ್ಲಿ ಮುಳಬಾಗಿಲು ತಾಲ್ಲೂಕು ಆವನಿ ಹೋಬಳಿ ವಿ. ಗುಟ್ಟಹಳ್ಳಿ ಗ್ರಾಮದ ಸ.ನಂ. 279/1ರ ಪೈಕಿ 1-00 ಎಕರೆ (ಒಂದು ಎಕರೆ) ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ದಾನವಾಗಿ ಪಡೆಯಲು Managing Trustee, ಜ್ಞಾನಜ್ಯೋತಿ ಎಜುಕೇಷನಲ್ ಟ್ರಸ್ಟ್, ಮುಳಬಾಗಿಲು ರವರಿಗೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 79ಎ, 79ಬಿ ಮತ್ತು 80 ಗಳಿಗೆ ವಿನಾಯ್ತಿಯನ್ನು ನೀಡಿ ಮೇಲ್ಕಂಡ ಜಮೀನನ್ನು ದಾನವಾಗಿ ಪಡೆಯಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 (I) (II) ರಂತೆ ಅನುಮತಿಯನ್ನು ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ನೀಡಲಾಗಿದೆ.

1. ಯಾವ ಉದ್ದೇಶಕ್ಕಾಗಿ ಜಮೀನನ್ನು ಕ್ರಯಕ್ಕೆ ಪಡೆಯಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು 2 ವರ್ಷಗಳೊಳಗಾಗಿ ಉಪಯೋಗಿಸತಕ್ಕದ್ದು ಹಾಗೂ ಈ ಬಗ್ಗೆ ಲಿಖಿತ ಮೂಲಕ ಮಾಹಿತಿಯನ್ನು ಈ ಕಛೇರಿಗೆ ನೀಡತಕ್ಕದ್ದು.
2. ವಿನಾಯಿತಿ: ಅನುಮತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯ್ದೆ 1956ರ ಕಲಂ 3ರಲ್ಲಿ ಹೇಳಿರುವಂತೆ ಶೇಕಡ 55 ಪೆಯಿಡ್ ಆಫ್ ಷೇರ್ ಬಂಡವಾಳ ಹೊಂದಿದ ರಾಜ್ಯ ಸರ್ಕಾರ ಅಥವಾ ಕೇಂದ್ರ ಸರ್ಕಾರದ ಅಥವಾ ರಾಜ್ಯ ನಿಯಂತ್ರಿತ ಅಥವಾ ಎರಡರ ಹಿಡಿತ ಹೊಂದಿರುವ ಸರ್ಕಾರದ

ಸಂಘ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆ ಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ನಿಗದಿತ ಉದ್ದೇಶಕ್ಕಾಗಿ ಅಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.

3. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯ್ದೆ 1964ರ ಕಲಂ 95ರಂತೆ ಜಿಲ್ಲಾಧಿಕಾರಿಗಳಿಂದ (ಸಕ್ಷಮ ಪ್ರಾಧಿಕಾರದಿಂದ) ಅನುಮತಿ ಪಡೆಯಬೇಕು.
4. ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ ಸಿ.ಡಿ.ಪಿ: ಓಡಿಪಿ ಗ್ರಾಮ ಪಂಚಾಯಿತಿಯ ವ್ಯಾಪ್ತಿಯ ಒಳಗೆ ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸಿಕೊಳ್ಳತಕ್ಕದ್ದು.
5. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾಗಿರುವ ಅನುಮತಿಯನ್ನು ಕಾನೂನು ರೀತ್ಯಾ ರದ್ದುಪಡಿಸಲಾಗುವುದು. ಮತ್ತು ಪ್ರಸ್ತಾಪಿತ ಜಮೀನನ್ನು ಋಣ ಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಿಕೊಳ್ಳಲಾಗುವುದು.
6. ಈ ಅನುಮತಿಯು ಭೂ ಸುಧಾರಣಾ ಕಾಯ್ದೆ 1961ರ ಕಲಂ 109 (I) (II) ರನ್ವಯ ಮಾತ್ರವಾಗಿರುತ್ತದೆ. ಬೇರೆ ಕಾನೂನುಗಳ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

ಪಿ.ಆರ್.685 ಜಿಲ್ಲಾಧಿಕಾರಿಗಳು (ಪ್ರಭಾರ), ಕೋಲಾರ ಜಿಲ್ಲೆ.

## ಜಿಲ್ಲಾಧಿಕಾರಿಗಳ ಕಾರ್ಯಾಲಯ ಕೋಲಾರ ಜಿಲ್ಲೆ, ಕೋಲಾರ

## ಅಧಿಸೂಚನೆ

### ನಂ.ಎಲ್ಆರ್ಎಫ್ (ಕಲಂ 109) ಸಿಆರ್ 20:2004-05, ದಿನಾಂಕ: 26ನೇ ಏಪ್ರಿಲ್, 2005

ಬಂಗಾರಪೇಟೆ ತಾಲ್ಲೂಕು ರಾಬರ್ಟ್‌ಸನ್‌ಪೇಟೆ ಹೋಬಳಿ ಗಿಡ್ಡೇಗೌಡನಹಳ್ಳಿ ಗ್ರಾಮದ ಸ.ನಂ.38/1 ರ 1-35 ಎಕರೆ ಜಮೀನಿನಲ್ಲಿ 1-00 ಎಕರೆ ಜಮೀನನ್ನು ವೃದ್ಧಾಶ್ರಮ ಸ್ಥಾಪನೆಗಾಗಿ ಮತ್ತು ಉಳಿದ 0-35 ಗುಂಟೆ ಜಮೀನನ್ನು ಹಾಗೂ ಸ.ನಂ. 39/1ರ 4-08 ಎಕರೆ, ಸ.ನಂ.40/1ರ 4-01 ಎಕರೆ ಜಮೀನನ್ನು ಮತ್ತು ಬಲಿಗಾನಹಳ್ಳಿ ಗ್ರಾಮದ ಸ.ನಂ.43 ರಲ್ಲಿ 0-29 ಗುಂಟೆ ಜಮೀನನ್ನು ಹೀಗೆ ಒಟ್ಟು 9-33 ಎಕರೆ ಜಮೀನನ್ನು ತೋಟಗಾರಿಕೆಗಾಗಿ ಕ್ರಯಕ್ಕೆ ಪಡೆಯಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109(1)ರ ಅಡಿಯಲ್ಲಿ ಅನುಮತಿ ನೀಡಲು ಕೋರಿ ಅಧ್ಯಕ್ಷರು, Precious Blood Missionaries, ಬನ್ನೇರುಘಟ್ಟ ರಸ್ತೆ (ಹುಳಿಮಾವು) ಬೆಂಗಳೂರು ರವರು ನಮೂನೆ 15ಎ ರಲ್ಲಿ ಅರ್ಜಿಯನ್ನು ಅಗತ್ಯ ದಾಖಲೆಗಳೊಂದಿಗೆ ಸಲ್ಲಿಸಿರುವ ಸಂಬಂಧ ತಹಶೀಲ್ದಾರ್ ಬಂಗಾರಪೇಟೆ ತಾಲ್ಲೂಕು ರವರು ಪತ್ರ ಸಂಖ್ಯೆ: ಎಲ್ಆರ್ಎಫ್ ಸಿಆರ್ 22/2004-05 ದಿನಾಂಕ: 31.03.2005ರಂತೆ ಕಡತ ತಯಾರಿಸಿ ಸಲ್ಲಿಸಿರುವ ಪ್ರಸ್ತಾವನೆಯನ್ನು ಸಹಾಯಕ ಕಮೀಷನರ್ ಕೋಲಾರ ಉಪ ವಿಭಾಗ ರವರು ಪರಿಶೀಲಿಸಿ ಅರ್ಜಿದಾರರಿಗೆ ಮೇಲ್ಕಂಡ ಜಮೀನನ್ನು ಪ್ರಸ್ತಾಪಿತ ಉದ್ದೇಶಕ್ಕಾಗಿ ಕ್ರಯಕ್ಕೆ ಪಡೆಯಲು ಅನುಮತಿಯನ್ನು ನೀಡಲು ವರದಿ ಸಂಖ್ಯೆ: ಎಲ್ಆರ್ಎಫ್. ಸಿಆರ್ 1: 2005-06 ದಿನಾಂಕ: 13.04.2005 ರಂತೆ ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಲಾಗಿರುತ್ತೆ. ಬಂಗಾರಪೇಟೆ ತಾಲ್ಲೂಕು ರಾಬರ್ಟ್‌ಸನ್‌ಪೇಟೆ ಹೋಬಳಿ ಗಿಡ್ಡೇಗೌಡನಹಳ್ಳಿ ಗ್ರಾಮದ ಸ.ನಂ. 38/1ರ 1-35 ಎಕರೆ, 39/1ರ 4-08 ಎಕರೆ ಜಮೀನುಗಳ ಖಾತೆ ಸಮೀನ್ ತಾಜ್ ಕೋಂ ಜಾಂದ್‌ಪಾಷ ಎಂಬುವವರ ಹೆಸರಿನಲ್ಲಿಯೂ, ಸ.ನಂ.40/1ರ 4-01 ಎಕರೆ ಮತ್ತು ಬಲಿಗಾನಹಳ್ಳಿ ಗ್ರಾಮದ ಸ.ನಂ.43ರ 0-29 ಗುಂಟೆ ಜಮೀನಿನ ಖಾತೆ ಎ. ಜಾಂದ್ ಪಾಷ ಬಿನ್ ವಿ.ಕೆ. ಅಮೀರ್ ಖಾನ್ ಎಂಬುವವರ ಹೆಸರಿನಲ್ಲಿಯೂ ಇರುತ್ತೆ. ಮೇಲ್ಕಂಡ ಜಮೀನುಗಳು ಇವರಿಗೆ ಕ್ರಯ ಮೂಲಕ ಬಂದಿರುತ್ತೆ. ಸದರಿ ಜಮೀನುಗಳನ್ನು ಅರ್ಜಿದಾರರಿಗೆ ಕ್ರಯಕ್ಕೆ ನೀಡಲು ಒಪ್ಪಿ ಕ್ರಯದ ಕರಾರು ಪತ್ರಗಳನ್ನು ಬರೆಸಿಕೊಟ್ಟಿರುತ್ತಾರೆ. ಮೇಲ್ಕಂಡ ಜಮೀನುಗಳು ಭೂ ಮಂಜೂರಾತಿ ನಿಯಮ/ ಕರ್ನಾಟಕ ಭೂ ಸುಧಾರಣೆ ಕಾಯ್ದೆ/ ಇನಾಂ ರದ್ದಿಯಾತಿ ಕಾಯ್ದೆ ಮತ್ತು ಪಿ.ಟಿ.ಸಿ.ಎಲ್. ಕಾಯ್ದೆಗಳ ವ್ಯಾಪ್ತಿಗೆ ಒಳಪಟ್ಟಿರುವುದಿಲ್ಲ. ಮೇಲ್ಕಂಡ ಜಮೀನುಗಳ ಬಗ್ಗೆ ಯಾರೂ ಗೇಣಿ ಅರ್ಜಿಗಳನ್ನು ಸಲ್ಲಿಸಿರುವುದಿಲ್ಲ. ಹಾಗೂ ಪ್ರಸ್ತಾಪಿತ ಜಮೀನುಗಳು ಯಾರಿಗೂ ಪರಬಾರೆಯಾಗಿರುವುದಿಲ್ಲ.

ಅರ್ಜಿದಾರರ ಸಂಘವು (Precious Blood Missionaries) ಸಂಘ ಸಂಸ್ಥೆಗಳ ರಿಜಿಸ್ಟ್ರಾರ್ ಬೆಂಗಳೂರು ರವರ ಕಛೇರಿಯಲ್ಲಿ ಕ್ರಮಸಂಖ್ಯೆ 359/87-88 ದಿನಾಂಕ: 02.09.87 ರಂತೆ ನೋಂದಾಯಿಸಲ್ಪಟ್ಟಿರುತ್ತೆ. ಅರ್ಜಿದಾರರು ಈ ಸಂಬಂಧ Memorandum of Articles of Association ಮತ್ತು ಯೋಜನಾ ವರದಿಗಳನ್ನು ಹಾಜರುಪಡಿಸಿರುತ್ತಾರೆ. ಅರ್ಜಿದಾರರು ಗಿಡ್ಡೇಗೌಡನಹಳ್ಳಿ ಗ್ರಾಮದ ಸ.ನಂ.38/1ರ 1-35 ಪೈಕಿ 1-00 ಎಕರೆ ಜಮೀನನ್ನು ವೃದ್ಧಾಶ್ರಮವನ್ನು ಸ್ಥಾಪಿಸಲು ಹಾಗೂ ಉಳಿದ 0-35 ಗುಂಟೆ ಜಮೀನನ್ನು ಸ.ನಂ.39/1ರ 4-08 ಎಕರೆ, ಸ.ನಂ.40/1ರ 4-01 ಎಕರೆ ಹಾಗೂ ಬಲಿಗಾನಹಳ್ಳಿ ಗ್ರಾಮದ ಸ.ನಂ.43 ರಲ್ಲಿ 0-29 ಗುಂಟೆ ಹೀಗೆ ಒಟ್ಟು 9-33 ಎಕರೆ ಜಮೀನನ್ನು ತೋಟಗಾರಿಕೆ ಉದ್ದೇಶಕ್ಕಾಗಿ ಕ್ರಯಕ್ಕೆ ಪಡೆಯಲು ಉದ್ದೇಶಿಸಿದ್ದು ಈ ಸಂಬಂಧ ಸದರಿ ಜಮೀನುಗಳನ್ನು ಕ್ರಯಕ್ಕೆ ಪಡೆಯಲು ಅನುಮತಿಯನ್ನು ಕೋರಿರುತ್ತಾರೆ.

ಸರ್ಕಾರಿ ಅಧಿಸೂಚನೆ ಸಂಖ್ಯೆ: ಸಂವ್ಯಶಾಇ 47 ಶಾಸನ 2001 ಬೆಂಗಳೂರು ದಿನಾಂಕ: 23.04.2003ರಂತೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 (1)ಕ್ಕೆ ತಿದ್ದುಪಡಿಯನ್ನು ತಂದಿರುತ್ತೆ. (ಕರ್ನಾಟಕ ಭೂ ಸುಧಾರಣೆ (ತಿದ್ದುಪಡಿ) ಕಾಯಿದೆ 2002) ಇದರಂತೆ ಕಲಂ 109 (1) (V) ರ ಅಡಿಯಲ್ಲಿ ತೋಟಗಾರಿಕಾ ಉದ್ದೇಶಕ್ಕಾಗಿ 10 ಯೂನಿಟ್‌ಗಳಿಗೆ ಮೀರದಂತೆ ಜಮೀನನ್ನು ಕ್ರಯಕ್ಕೆ/ ದಾನವಾಗಿ ಪಡೆಯಲು ವಿನಾಯ್ತಿಯನ್ನು/ ಅನುಮತಿಯನ್ನು ನೀಡುವ ಅಧಿಕಾರವನ್ನು ಜಿಲ್ಲಾಧಿಕಾರಿಗಳಿಗೆ ನೀಡಿರುತ್ತೆ. ಸರ್ಕಾರಿ ಅಧಿಸೂಚನೆ ನಂ. ಸಂವ್ಯಶಾಇ 67 ಶಾಸನ 2003, ಬೆಂಗಳೂರು ದಿನಾಂಕ: 10.03.2004ರಂತೆ ಕರ್ನಾಟಕ ಭೂ ಸುಧಾರಣೆ ಕಾಯಿದೆ 1961ರ ಕಲಂ 109 (1ಎ) ಗೆ ತಿದ್ದುಪಡಿಯನ್ನು ತಂದಿರುತ್ತೆ. (ಕರ್ನಾಟಕ ಭೂ ಸುಧಾರಣೆ (ತಿದ್ದುಪಡಿ) ಕಾಯಿದೆ 2004) ಇದರಂತೆ ಕಲಂ 109(1) ರಲ್ಲಿ ವಿವರಿಸಿರುವ ಉದ್ದೇಶಗಳನ್ನು ಹೊರತುಪಡಿಸಿ ಇತರೆ ಉದ್ದೇಶಗಳಿಗಾಗಿ ಅರ್ಧ ಹೆಕ್ಟೇರ್‌ಗೆ ಮೀರದಂತೆ ಜಮೀನನ್ನು ಕ್ರಯಕ್ಕೆ/ ದಾನವಾಗಿ ಪಡೆಯಲು ವಿನಾಯ್ತಿ/ ಅನುಮತಿಯನ್ನು ನೀಡುವ ಅಧಿಕಾರವನ್ನು ಜಿಲ್ಲಾಧಿಕಾರಿಗಳಿಗೆ ನೀಡಿರುತ್ತೆ. ಅರ್ಜಿದಾರರು 9-33 ಎಕರೆ ಜಮೀನನ್ನು ತೋಟಗಾರಿಕೆಗಾಗಿ ಮತ್ತು 1-00 ಎಕರೆ ಜಮೀನನ್ನು ವೃದ್ಧಾಶ್ರಮವನ್ನು ಸ್ಥಾಪಿಸಲು ಕ್ರಯಕ್ಕೆ ಪಡೆಯಲು ಉದ್ದೇಶಿಸಿರುವುದರಿಂದ ಈ ಪ್ರಸ್ತಾವನೆಯು ಕರ್ನಾಟಕ ಭೂ ಸುಧಾರಣೆ ಕಾಯಿದೆ 109 (1) ಮತ್ತು 109(1ಎ) ಗೆ ಅನುಗುಣವಾಗಿರುತ್ತೆ.

ಇದರಂತೆ ಬಂಗಾರಪೇಟೆ ತಾಲ್ಲೂಕು ರಾಬರ್ಟ್‌ಸನ್‌ಪೇಟೆ ಹೋಬಳಿ ಗಿಡ್ಡೇಗೌಡನಹಳ್ಳಿ ಗ್ರಾಮದ ಸ.ನಂ.38/1ರ 1-35 ಎಕರೆ ಪೈಕಿ 0-35 ಗುಂಟೆ, ಸ.ನಂ. 39/1ರ 4-08 ಎಕರೆ, ಸ.ನಂ.40/1ರ 4-01 ಎಕರೆ ಮತ್ತು ಬಲಿಗಾನಹಳ್ಳಿ ಗ್ರಾಮದ ಸ.ನಂ. 43ರಲ್ಲಿ 0-29 ಗುಂಟೆ (ಒಟ್ಟು 9-33 ಎಕರೆ) ಜಮೀನನ್ನು ತೋಟಗಾರಿಕಾ ಉದ್ದೇಶಗಳಿಗಾಗಿಯೂ ಹಾಗೂ ಗಿಡ್ಡೇಗೌಡನಹಳ್ಳಿ ಗ್ರಾಮದ ಸ.ನಂ. 38/1 ರ 1-35 ಪೈಕಿ 1-00 ಎಕರೆ ಜಮೀನನ್ನು ವೃದ್ಧಾಶ್ರಮವನ್ನು ಸ್ಥಾಪಿಸಲು (ಎಲ್ಲಾ ಜಮೀನುಗಳು ಸೇರಿ ಒಟ್ಟು 10-33 ಎಕರೆ (ಹತ್ತು ಎಕರೆ ಮೂವತ್ತ ಮೂರು ಗುಂಟೆ ಜಮೀನನ್ನು) ಕ್ರಯಕ್ಕೆ ಪಡೆಯಲು ಅಧ್ಯಕ್ಷರು Precious Blood Missionaries, Bangalore ರವರಿಗೆ ಕರ್ನಾಟಕ ಭೂ ಸುಧಾರಣೆ ಕಾಯ್ಕೆ 1961ರ ಕಲಂ 79ಎ,

79ಬಿ ಗಳಿಗೆ ವಿನಾಯ್ತಿಯನ್ನು ನೀಡಿ ಸದರಿ ಜಮೀನುಗಳನ್ನು ಕ್ರಯಕ್ಕೆ ಪಡೆಯಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ (ತಿದ್ದುಪಡಿ ಕಾಯಿದೆ 2002) ಕಲಂ 109 (1) (V) ಮತ್ತು (ತಿದ್ದುಪಡಿ ಕಾಯಿದೆ 2004)ರ ಕಲಂ 109 (1ಎ) ರಡಿಯಲ್ಲಿ ಅನುಮತಿಯನ್ನು ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ನೀಡಲಾಗಿರುತ್ತೆ.

1. ಯಾವ ಉದ್ದೇಶಕ್ಕಾಗಿ ಜಮೀನುಗಳನ್ನು ಕ್ರಯಕ್ಕೆ ಪಡೆಯಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು 2 ವರ್ಷಗಳೊಳಗಾಗಿ ಉಪಯೋಗಿಸತಕ್ಕದ್ದು ಹಾಗೂ ಈ ಬಗ್ಗೆ ಲಿಖಿತ ಮೂಲಕ ಮಾಹಿತಿಯನ್ನು ಈ ಕಛೇರಿಗೆ ನೀಡತಕ್ಕದ್ದು.
2. ವಿನಾಯಿತಿ: ಅನುಮತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯ್ದೆ 1956ರ ಕಲಂ 3 ರಲ್ಲಿ ಹೇಳಿರುವಂತೆ ಶೇಕಡ 55 ಪೆಯಿಡ್ ಆಫ್ ಷೇರ್ ಬಂಡವಾಳ ಹೊಂದಿದ ರಾಜ್ಯ ಸರ್ಕಾರ ಅಥವಾ ಕೇಂದ್ರ ಸರ್ಕಾರದ ಅಥವಾ ರಾಜ್ಯ ನಿಯಂತ್ರಿತ ಅಥವಾ ಎರಡರ ಹಿಡಿತ ಹೊಂದಿರುವ ಸರ್ಕಾರದ ಸಂಘ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆ ಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ನಿಗದಿತ ಉದ್ದೇಶಕ್ಕಾಗಿ ಅಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.
3. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯ್ದೆ 1964ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯಬೇಕು.
4. ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ ಸಿ.ಡಿ.ಪಿ.: ಓಡಿಪಿ ಗ್ರಾಮ ಪಂಚಾಯಿತಿಯ ವ್ಯಾಪ್ತಿಯ ಒಳಗೆ ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸಿಕೊಳ್ಳತಕ್ಕದ್ದು.
5. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾಗಿರುವ ಅನುಮತಿಯನ್ನು ಕಾನೂನು ರೀತ್ಯಾ ರದ್ದುಪಡಿಸಲಾಗುವುದು. ಮತ್ತು ಪ್ರಸ್ತಾಪಿತ ಜಮೀನನ್ನು ಋಣ ಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಿಕೊಳ್ಳಲಾಗುವುದು.
6. ಈ ಅನುಮತಿಯು ಭೂ ಸುಧಾರಣಾ ಕಾಯ್ದೆ 1961ರ ಕಲಂ 109 (1) ಮತ್ತು ಕಲಂ 109(1ಎ) ರನ್ವಯ ಮಾತ್ರವಾಗಿರುತ್ತದೆ. ಬೇರೆ ಕಾನೂನುಗಳ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

ಜಿಲ್ಲಾಧಿಕಾರಿಗಳು (ಪ್ರಭಾರ),
ಪಿ.ಆರ್.686 ಕೋಲಾರ ಜಿಲ್ಲೆ.

## ಕರ್ನಾಟಕ ವಿದ್ಯುತ್ ಪ್ರಸರಣಾ ನಿಗಮ ನಿಯಮಿತ

## ಪ್ರಕಟಣೆ

**ಸಂಖ್ಯೆ: ಎಇಇ(ಕ)/ ಟಿ-149/5334-36, ದಿನಾಂಕ: 16ನೇ ಫೆಬ್ರವರಿ, 2005**

ವಿದ್ಯುತ್ ಪೂರೈಕೆ ಅಧಿನಿಯಮ 1948, ಸೆಕ್ಷನ್ 28 ಮತ್ತು 18(ಇ) ಅನುಸಾರವಾಗಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು ಒಂದು ಯೋಜನೆಯನ್ನು ರೂಪಿಸಿದೆ. ಈ ಯೋಜನೆಯನ್ನು ಅದೇ ಅಧಿನಿಯಮದ ಸೆಕ್ಷನ್ 29(2)ಕ್ಕೆ ಅನುಸಾರವಾಗಿ ಇಲ್ಲಿ ಪ್ರಕಟಿಸಲಾಗಿದೆ. ಈ ಪ್ರಕಟಣೆಯನ್ನು ಲೈಸೆನ್ಸ್ ಹೊಂದಿರುವವರು ಮತ್ತು ಇನ್ನಿತರ ಯಾವುದೇ ಸಂಬಂಧಿಸಿದ ವ್ಯಕ್ತಿಗಳ ಮಾಹಿತಿಗಾಗಿ ನೀಡಲಾಗಿದೆ. ಯೋಜನೆಯ ವಿವರಗಳು ಕೆಳಕಂಡಂತಿವೆ:

| | |
|---|---|
| **ಕೆಲಸದ ಹೆಸರು:** | ಬೀರನಹಳ್ಳಿ ಹತ್ತಿರ 66 ಕೆ.ವಿ. ಸಕಲೇಶಪುರ- ಅರೇಹಳ್ಳಿ ವಿದ್ಯುತ್ ಮಾರ್ಗದಿಂದ ಸಂಪರ್ಕ ಜೋಡಣೆ ಮಾಡಿ ಉದ್ದೇಶಿತ ಹಾಸನ ಜಿಲ್ಲೆ, ಸಕಲೇಶಪುರ ತಾಲ್ಲೂಕು, ಹಾನುಬಾಳು 66/11 ಕೆ.ವಿ. ವಿದ್ಯುತ್ ವಿತರಣಾ ಕೇಂದ್ರಕ್ಕೆ ಹೊಸ ವಿದ್ಯುತ್ ಮಾರ್ಗ ನಿರ್ಮಾಣ. |
| **ಉದ್ದೇಶ:** | ಹಾಸನ ಜಿಲ್ಲೆಯ, ಸಕಲೇಶಪುರ ತಾಲ್ಲೂಕು, ಹಾನುಬಾಳು ಹಾಗೂ ಸುತ್ತಮುತ್ತಲ ಪ್ರದೇಶದ ವೋಲ್ಟೇಜ್ ಸ್ಥಿತಿ ಉತ್ತಮ ಪಡಿಸಿ ಸ್ಥಿರವಾದ ವಿದ್ಯುತ್ ಪೂರೈಸಲು ಮತ್ತು ಭವಿಷ್ಯದಲ್ಲಿ ವಿದ್ಯುತ್ ಹೊರೆ ಸರಿದೂಗಿಸುವ ಸಲುವಾಗಿ. |
| **ಹಾದು ಹೋಗುವ ಪ್ರದೇಶ:** | ಬೈಕೆರೆ, ಹೆಮ್ಮಳ್ಳಿ, ದಬ್ಬೆಗದ್ದೆ, ಮಾವಿನಹಳ್ಳಿ, ಅಗಲಹಳ್ಳಿ, ಮಂದಾಪುರ ವೆಂಕಟಹಳ್ಳಿ, ಹಾನುಬಾಳು. |
| **ಅಂದಾಜು ವೆಚ್ಚ:** | ರೂ. 115.00 ಲಕ್ಷ |

ಮೇಲಿನ ಯೋಜನೆಯನ್ನು ಕಾರ್ಯರೂಪಕ್ಕೆ ತರಲು ಭಾರತೀಯ ಟೆಲಿಗ್ರಾಫ್ ಅಧಿನಿಯಮ 1985 (13)ರಲ್ಲಿ ಉಪಲಭ್ಯವಾಗಿರುವ ಎಲ್ಲಾ ಅಧಿಕಾರವನ್ನು ಕವಿಪ್ರನಿನಿ ಹೊಂದಿರುವುದು, ಮತ್ತು ಅಧಿಕಾರವನ್ನು ಕವಿಪ್ರನಿನಿ ಚಲಾಯಿಸುವುದು. ಈ ಯೋಜನೆಯ ಬಗೆಗೆ ಏನಾದರೂ ಆಕ್ಷೇಪಣೆಗಳು ಇದ್ದಲ್ಲಿ ಅದನ್ನು ಈ ಪ್ರಕಟಣೆಯ ದಿನಾಂಕದಿಂದ ಎರಡು ತಿಂಗಳೊಳಗಾಗಿ ಕಾರ್ಯಪಾಲಕ ಇಂಜಿನಿಯರ್(ವಿ), ಬೃಹತ್ ಕಾಮಗಾರಿ ವಿಭಾಗ, ಕವಿಪ್ರನಿನಿ, ಹಾಸನ ಇವರಿಗೆ ಸಲ್ಲಿಸಬೇಕಾಗಿ ವಿನಂತಿ.

ಕಾರ್ಯನಿರ್ವಾಹಕ ಇಂಜಿನಿಯರ್ (ವಿ),
ಪಿ.ಡಿ.34 ಬೃಕಾವಿ/ ಕವಿಪ್ರನಿನಿ/ ಹಾಸನ.

## ACER TECHNOLOGY VENTURES ADVISORY (INDIA) PRIVATE LIMITED

## NOTICE

Notice is hereby given that pursuant to section 485 of the Companies Act 1956, the members of the above company, at the Extra Ordinary General Meeting of the company held on Monday, 9th May 2005, have resolved to windup the company as "Members Voluntary Winding up" and have appointed the undersigned as the Liquidator of the company.

Place: Bangalore **P.K. NARENDRA**
Date: 9th May, 2005 LIQUIDATOR.

**ACER TECHNOLOGY VENTURES ADVISORY (INDIA) PRIVATE LIMITED**
**FORM 151**
**(See Rule 315)**
**Companies Act 1956**
**Member's Voluntary Winding-up**
**Notice of appointment of Liquidator pursuant to section 516**

**Co.No.:30157**

| | | |
|---|---|---|
| Name of the company | : | Acer Technology Ventures Advisor (India) Private Limited. |
| Nature of Business | : | To carry on the business of rendering business and management advisory services. |
| Registered office address | : | 003, Salarpuria Cambridge Apartments, Someshwarapura 1st Cross, Ulsoor, Bangalore-560008. |
| Name of Liquidator and address | : | P.K. Narendra, Partner,<br>P.K. Narendra & Co, Chartered Accountants, 15, Basappa Road, Shanthi Nagar, Bangalore-560027. |
| Date of appointment | : | 9th May 2005. |
| By whom appointed | : | Members of the Company at the Extra ordinary general meeting held on 9th May 2005. |

Place: Bangalore **P.K. NARENDRA**
Date: 9th May, 2005 LIQUIDATOR.

**ACER TECHNOLOGY VENTURES ADVISORY (INDIA) PRIVATE LIMITED**
**FORM 152**
**(See Rule 315)**
**Companies Act 1956**
**Member's Voluntary Winding-up**
**Notice of appointment of Liquidator pursuant to section 516**

**Co.No.:30157**

Name of the company : Acer Technology Ventures Advisory (India) Private Limited.
Nature of Business : Rendering business and management advisory Services.
Presented by : Mr. P.K. Narendra, Liquidator.

To,
The Registrar of Companies, Karnataka,
Bangalore.

I, P.K. Narendra Partner, P.K. Narendra & Co, Chartered Accountants, 15, Basappa Road, Shanthi Nagar, Bangalore hereby give notice that I have been appointed Liquidator of Acer Technology Ventures advisory (India) Private Limited, by special resolution passed on 9th May 2005 by the Members of the company.

Place: Bangalore
Date: 9th May 2005

**Note:** State how appointed, whether by resolution of the company, creditors of the company or otherwise.

**P.K. NARENDRA**
PD-38 LIQUIDATOR.

**ಕರ್ನಾಟಕ ವಿದ್ಯುತ್ ಪ್ರಸರಣಾ ನಿಗಮ ನಿಯಮಿತ**
**ಪ್ರಕಟಣೆ**
**ಸಂಖ್ಯೆ: ಎಇಇ(ಕ)/ ಟಿ-121/ 5337-39, ದಿನಾಂಕ: 16ನೇ ಫೆಬ್ರವರಿ, 2005**

ವಿದ್ಯುತ್ ಪೂರೈಕೆ ಅಧಿನಿಯಮ 1948, ಸೆಕ್ಷನ್ 28 ಮತ್ತು 18(ಇ) ಅನುಸಾರವಾಗಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು ಒಂದು ಯೋಜನೆಯನ್ನು ರೂಪಿಸಿದೆ. ಈ ಯೋಜನೆಯನ್ನು ಅದೇ ಅಧಿನಿಯಮದ ಸೆಕ್ಷನ್ 29(2)ಕ್ಕೆ ಅನುಸಾರವಾಗಿ ಇಲ್ಲಿ ಪ್ರಕಟಿಸಲಾಗಿದೆ. ಈ ಪ್ರಕಟಣೆಯನ್ನು ಲೈಸೆನ್ಸ್ ಹೊಂದಿರುವವರು ಮತ್ತು ಇನ್ನಿತರ ಯಾವುದೇ ಸಂಬಂಧಿಸಿದ ವ್ಯಕ್ತಿಗಳ ಮಾಹಿತಿಗಾಗಿ ನೀಡಲಾಗಿದೆ. ಯೋಜನೆಯ ವಿವರಗಳು ಕೆಳಕಂಡಂತಿವೆ:

**ಕೆಲಸದ ಹೆಸರು:** ಹಿರಿಸಾವೆ ಹತ್ತಿರ 66 ಕೆ.ವಿ. ಚನ್ನರಾಯಪಟ್ಟಣ- ಹಿರಿಸಾವೆ ವಿದ್ಯುತ್ ಮಾರ್ಗದಿಂದ ಸಂಪರ್ಕ ಜೋಡಣೆ ಮಾಡಿ ಉದ್ದೇಶಿತ ಹಾಸನ ಜಿಲ್ಲೆ, ಚನ್ನರಾಯಪಟ್ಟಣ ತಾಲ್ಲೂಕು, ದಿಡಗ 66/11 ಕೆ.ವಿ. ವಿದ್ಯುತ್ ವಿತರಣಾ ಕೇಂದ್ರಕ್ಕೆ ಹೊಸ ವಿದ್ಯುತ್ ಮಾರ್ಗ ನಿರ್ಮಾಣ.

**ಉದ್ದೇಶ:** ಹಾಸನ ಜಿಲ್ಲೆಯ, ಚನ್ನರಾಯಪಟ್ಟಣ ತಾಲ್ಲೂಕು, ದಿಡಗ ಹಾಗೂ ಸುತ್ತಮುತ್ತಲ ಪ್ರದೇಶದ ವೋಲ್ಟೇಜ್ ಸ್ಥಿತಿ ಉತ್ತಮ ಪಡಿಸಿ ಸ್ಥಿರವಾದ ವಿದ್ಯುತ್ ಪೂರೈಸಲು ಮತ್ತು ಭವಿಷ್ಯದಲ್ಲಿ ವಿದ್ಯುತ್ ಹೊರೆ ಸರಿದೂಗಿಸುವ ಸಲುವಾಗಿ.

**ಹಾದು ಹೋಗುವ ಪ್ರದೇಶ:** ಹಿರಿಸಾವೆ, ಮಾಚುಬನಹಳ್ಳಿ, ಜಿನ್ನೇನಹಳ್ಳಿ, ನಾಗನಹಳ್ಳಿ, ಹೊಸಹಳ್ಳಿ, ಹುಲ್ಲಹಳ್ಳಿ, ಮೆಲ್ಲಹಳ್ಳಿ, ಕರಿಕ್ಯಾತನಹಳ್ಳಿ, ದಿಡಗ.

**ಅಂದಾಜು ವೆಚ್ಚ:** ರೂ. 130.00 ಲಕ್ಷ

ಮೇಲಿನ ಯೋಜನೆಯನ್ನು ಕಾರ್ಯರೂಪಕ್ಕೆ ತರಲು ಭಾರತೀಯ ಟೆಲಿಗ್ರಾಫ್ ಅಧಿನಿಯಮ 1985 (13)ರಲ್ಲಿ ಉಪಲಭ್ಯವಾಗಿರುವ ಎಲ್ಲಾ ಅಧಿಕಾರವನ್ನು ಕವಿಪ್ರನಿನಿ ಹೊಂದಿರುವುದು, ಮತ್ತು ಅಧಿಕಾರವನ್ನು ಕವಿಪ್ರನಿನಿ ಚಲಾಯಿಸುವುದು. ಈ ಯೋಜನೆಯ ಬಗೆಗೆ ಏನಾದರೂ ಆಕ್ಷೇಪಣೆಗಳು ಇದ್ದಲ್ಲಿ ಅದನ್ನು ಈ ಪ್ರಕಟಣೆಯ ದಿನಾಂಕದಿಂದ ಎರಡು ತಿಂಗಳೊಳಗಾಗಿ ಕಾರ್ಯಪಾಲಕ ಇಂಜಿನಿಯರ್(ವಿ), ಬೃಹತ್ ಕಾಮಗಾರಿ ವಿಭಾಗ, ಕವಿಪ್ರನಿನಿ, ಹಾಸನ ಇವರಿಗೆ ಸಲ್ಲಿಸಬೇಕಾಗಿ ವಿನಂತಿ.

ಕಾರ್ಯನಿರ್ವಾಹಕ ಇಂಜಿನಿಯರ್ (ವಿ),
ಪಿ.ಡಿ.35 ಬೃಕಾವಿ/ ಕವಿಪ್ರನಿನಿ/ ಹಾಸನ.

## ಕರ್ನಾಟಕ ವಿದ್ಯುತ್ ಪ್ರಸರಣಾ ನಿಗಮ ನಿಯಮಿತ
## ಪ್ರಕಟಣೆ
### ಸಂಖ್ಯೆ: ಎಇಇ(ಕ)/ ಟಿ-102/ 6264-66, ದಿನಾಂಕ: 26ನೇ ಮಾರ್ಚ್, 2005

ವಿದ್ಯುತ್ ಪೂರೈಕೆ ಅಧಿನಿಯಮ 1948, ಸೆಕ್ಷನ್ 28 ಮತ್ತು 18(ಇ) ಅನುಸಾರವಾಗಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು ಒಂದು ಯೋಜನೆಯನ್ನು ರೂಪಿಸಿದೆ. ಈ ಯೋಜನೆಯನ್ನು ಅದೇ ಅಧಿನಿಯಮದ ಸೆಕ್ಷನ್ 29(2)ಕ್ಕೆ ಅನುಸಾರವಾಗಿ ಇಲ್ಲಿ ಪ್ರಕಟಿಸಲಾಗಿದೆ. ಈ ಪ್ರಕಟಣೆಯನ್ನು ಲೈಸೆನ್ಸ್ ಹೊಂದಿರುವವರು ಮತ್ತು ಇನ್ನಿತರ ಯಾವುದೇ ಸಂಬಂಧಿಸಿದ ವ್ಯಕ್ತಿಗಳ ಮಾಹಿತಿಗಾಗಿ ನೀಡಲಾಗಿದೆ. ಯೋಜನೆಯ ವಿವರಗಳು ಕೆಳಕಂಡಂತಿವೆ:

**ಕೆಲಸದ ಹೆಸರು:** 66/11 ಕೆ.ವಿ. ಸಕಲೇಶಪುರ ವಿದ್ಯುತ್ ವಿತರಣಾ ಕೇಂದ್ರದಿಂದ ಉದ್ದೇಶಿತ ಹಾಸನ ಜಿಲ್ಲೆ, ಬೇಲೂರು ತಾಲ್ಲೂಕು, ಅರೇಹಳ್ಳಿ 66/11 ಕೆ.ವಿ. ವಿದ್ಯುತ್ ವಿತರಣಾ ಕೇಂದ್ರಕ್ಕೆ ಹೊಸ ವಿದ್ಯುತ್ ಮಾರ್ಗ ನಿರ್ಮಾಣ.

**ಉದ್ದೇಶ:** ಹಾಸನ ಜಿಲ್ಲೆಯ, ಬೇಲೂರು ತಾಲ್ಲೂಕು, ಅರೇಹಳ್ಳಿ ಹಾಗೂ ಸುತ್ತಮುತ್ತಲ ಪ್ರದೇಶದ ವೋಲ್ಟೇಜ್ ಸ್ಥಿತಿ ಉತ್ತಮ ಪಡಿಸಿ ಸ್ಥಿರವಾದ ವಿದ್ಯುತ್ ಪೂರೈಸಲು ಮತ್ತು ಭವಿಷ್ಯದಲ್ಲಿ ವಿದ್ಯುತ್ ಹೊರೆ ಸರಿದೂಗಿಸುವ ಸಲುವಾಗಿ.

**ಹಾದು ಹೋಗುವ ಪ್ರದೇಶ:** ಸಕಲೇಶಪುರ, ಅಚ್ಚಂಗಿ, ದೊಡ್ಡನಗರ, ಬಿರದಹಳ್ಳಿ, ಹೊಸಮನೆ, ಲಿಂಗಾಪುರ ಹೆಬ್ಬಾಲ, ಅರೇಹಳ್ಳಿ.

**ಅಂದಾಜು ವೆಚ್ಚ:** ರೂ.234.45 ಲಕ್ಷ

ಮೇಲಿನ ಯೋಜನೆಯನ್ನು ಕಾರ್ಯರೂಪಕ್ಕೆ ತರಲು ಭಾರತೀಯ ಟೆಲಿಗ್ರಾಫ್ ಅಧಿನಿಯಮ 1985 (13)ರಲ್ಲಿ ಉಪಲಭ್ಯವಾಗಿರುವ ಎಲ್ಲಾ ಅಧಿಕಾರವನ್ನು ಕವಿಪ್ರನಿನಿ ಹೊಂದಿರುವುದು, ಮತ್ತು ಅಧಿಕಾರವನ್ನು ಕವಿಪ್ರನಿನಿ ಚಲಾಯಿಸುವುದು. ಈ ಯೋಜನೆಯ ಬಗೆಗೆ ಏನಾದರೂ ಆಕ್ಷೇಪಣೆಗಳು ಇದ್ದಲ್ಲಿ ಅದನ್ನು ಈ ಪ್ರಕಟಣೆಯ ದಿನಾಂಕದಿಂದ ಎರಡು ತಿಂಗಳೊಳಗಾಗಿ ಕಾರ್ಯಪಾಲಕ ಇಂಜಿನಿಯರ್(ವಿ), ಬೃಹತ್ ಕಾಮಗಾರಿ ವಿಭಾಗ, ಕವಿಪ್ರನಿನಿ, ಹಾಸನ ಇವರಿಗೆ ಸಲ್ಲಿಸಬೇಕಾಗಿ ವಿನಂತಿ.

ಕಾರ್ಯನಿರ್ವಾಹಕ ಇಂಜಿನಿಯರ್ (ವಿ),
ಪಿ.ಡಿ.36 ಬೃಕಾವಿ/ ಕವಿಪ್ರನಿನಿ/ ಹಾಸನ.

## ಕರ್ನಾಟಕ ವಿದ್ಯುತ್ ಪ್ರಸರಣಾ ನಿಗಮ ನಿಯಮಿತ
## ಪ್ರಕಟಣೆ
### ಸಂಖ್ಯೆ: ಎಇಇ(ಕ)/ ಟಿ-228/ 6253-55, ದಿನಾಂಕ: 26ನೇ ಮಾರ್ಚ್, 2005

ವಿದ್ಯುತ್ ಪೂರೈಕೆ ಅಧಿನಿಯಮ 1948, ಸೆಕ್ಷನ್ 28 ಮತ್ತು 18(ಇ) ಅನುಸಾರವಾಗಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು ಒಂದು ಯೋಜನೆಯನ್ನು ರೂಪಿಸಿದೆ. ಈ ಯೋಜನೆಯನ್ನು ಅದೇ ಅಧಿನಿಯಮದ ಸೆಕ್ಷನ್ 29(2)ಕ್ಕೆ ಅನುಸಾರವಾಗಿ ಇಲ್ಲಿ ಪ್ರಕಟಿಸಲಾಗಿದೆ. ಈ ಪ್ರಕಟಣೆಯನ್ನು ಲೈಸೆನ್ಸ್ ಹೊಂದಿರುವವರು ಮತ್ತು ಇನ್ನಿತರ ಯಾವುದೇ ಸಂಬಂಧಿಸಿದ ವ್ಯಕ್ತಿಗಳ ಮಾಹಿತಿಗಾಗಿ ನೀಡಲಾಗಿದೆ. ಯೋಜನೆಯ ವಿವರಗಳು ಕೆಳಕಂಡಂತಿವೆ:

**ಕೆಲಸದ ಹೆಸರು:** ಕೊಡಗು ಜಿಲ್ಲೆ, ಕುಶಾಲನಗರದಲ್ಲಿನ ಉದ್ದೇಶಿತ 220 ಕೆ.ವಿ. ವಿದ್ಯುತ್ ವಿತರಣಾ ಕೇಂದ್ರದಿಂದ ಮೈಸೂರು ಜಿಲ್ಲೆ, ಪಿರಿಯಾಪಟ್ಟಣದಲ್ಲಿನ 66/11 ಕೆ.ವಿ. ವಿದ್ಯುತ್ ವಿತರಣಾ ಕೇಂದ್ರಕ್ಕೆ ಉದ್ದೇಶಿತ 66 ಕೆ.ವಿ. ಹೊಸ ವಿದ್ಯುತ್ ಮಾರ್ಗ ನಿರ್ಮಾಣ.

**ಉದ್ದೇಶ:** ಮೈಸೂರು ಜಿಲ್ಲೆಯ, ಪಿರಿಯಾಪಟ್ಟಣ ಹಾಗೂ ಸುತ್ತಮುತ್ತಲ ಪ್ರದೇಶದ ವೋಲ್ಟೇಜ್ ಸ್ಥಿತಿ ಉತ್ತಮ ಪಡಿಸಿ ಸ್ಥಿರವಾದ ವಿದ್ಯುತ್ ಪೂರೈಸಲು ಮತ್ತು ಭವಿಷ್ಯದಲ್ಲಿ ವಿದ್ಯುತ್ ಹೊರೆ ಸರಿದೂಗಿಸುವ ಸಲುವಾಗಿ.

**ಹಾದು ಹೋಗುವ ಪ್ರದೇಶ:** ಪಿರಿಯಾಪಟ್ಟಣ, ಅಬ್ಬೂರು, ಮೆಲ್ಲಹಳ್ಳಿ, ಮಲ್ಲರಾಜಪಟ್ಟಣ, ಹಾರ್ವೆ, ಹೆಮ್ಮಿಗ್ಗೆ, ವಡ್ಡರಪಾಳ್ಯ, ಕೊಂಡೆಗಾಳ, ಪುಂಡಹಳ್ಳಿ, ಭಾರತಿನಗರ, ಗುಳ್ಳೇದಹಳ್ಳಿ, ಹಂದಿಗುಡ್ಡ, ದೊಡ್ಡಹಾನೂರು, ಮರಡಿಯೂರು, ಆವರ್ತಿ, ಕುಶಾಲನಗರ.

**ಅಂದಾಜು ವೆಚ್ಚ:** ರೂ.342.41 ಲಕ್ಷ

ಮೇಲಿನ ಯೋಜನೆಯನ್ನು ಕಾರ್ಯರೂಪಕ್ಕೆ ತರಲು ಭಾರತೀಯ ಟೆಲಿಗ್ರಾಫ್ ಅಧಿನಿಯಮ 1985 (13)ರಲ್ಲಿ ಉಪಲಭ್ಯವಾಗಿರುವ ಎಲ್ಲಾ ಅಧಿಕಾರವನ್ನು ಕವಿಪ್ರನಿನಿ ಹೊಂದಿರುವುದು, ಮತ್ತು ಅಧಿಕಾರವನ್ನು ಕವಿಪ್ರನಿನಿ ಚಲಾಯಿಸುವುದು. ಈ ಯೋಜನೆಯ ಬಗೆಗೆ ಏನಾದರೂ ಆಕ್ಷೇಪಣೆಗಳು ಇದ್ದಲ್ಲಿ ಅದನ್ನು ಈ ಪ್ರಕಟಣೆಯ ದಿನಾಂಕದಿಂದ ಎರಡು ತಿಂಗಳೊಳಗಾಗಿ ಕಾರ್ಯಪಾಲಕ ಇಂಜಿನಿಯರ್(ವಿ), ಬೃಹತ್ ಕಾಮಗಾರಿ ವಿಭಾಗ, ಕವಿಪ್ರನಿನಿ, ಹಾಸನ ಇವರಿಗೆ ಸಲ್ಲಿಸಬೇಕಾಗಿ ವಿನಂತಿ.

ಕಾರ್ಯನಿರ್ವಾಹಕ ಇಂಜಿನಿಯರ್ (ವಿ),
ಪಿ.ಡಿ.37 ಬೃಕಾವಿ/ ಕವಿಪ್ರನಿನಿ/ ಹಾಸನ.

**ULTRA BUSINESS MACHINES PRIVATE LIMITED**
**(Under Liquidation being wound-up voluntarily by the Creditors' of the company)**
**Regd. Office:11/1 & 11/5, Old Market Road, Visveshwarapuram, Bangalore-560 004**
**FORM NO.155 (See Rule 329)**
**Creditors' Voluntary winding-up**
**Name of Company: ULTRA BUSINESS MACHINES PRIVATE LIMITED**
**Notice convening final meeting**

Notice is hereby given in pursuance of Section 509 that a General Meeting of the Creditors of the above named Company will be held at 11/1 & 11/5 Old Market Road, Visveshwarapuram, Bangalore-560 004, on Monday the 13th June, 2005 at 10.00 a.m. for the purpose of having an account laid before them showing the manner in which the winding-up has been conducted and the property of the Company disposed of and of hearing any explanation that may be given by the Liquidator and also of determining by a special resolution of the Company, the manner in which the books, accounts and documents of the Company and of the Liquidator shall be disposed of.

Dated this 23rd day of April, 2005, at Madurai.

for ULTRA BUSINESS MACHINES PVT LTD,
LIQUIDATOR.

**ULTRA BUSINESS MACHINES PRIVATE LIMITED**
**(Under Liquidation being wound-up voluntarily by the Creditors' of the company)**
**Regd. Office:11/1 & 11/5, Old Market Road, Visveshwarapuram, Bangalore-560 004**
**FORM NO.155 (See Rule 329)**
**Creditors' Voluntary winding-up**
**Name of Company: ULTRA BUSINESS MACHINES PRIVATE LIMITED**
**Notice convening final meeting**

Notice is hereby given in pursuance of Section 509 that a General Meeting of the Members of the above named Company will be held at 11/1 & 11/5 Old Market Road, Visveshwarapuram, Bangalore-560 004, on Monday the 13th June, 2005 at 11.00 a.m. for the purpose of having an account laid before them showing the manner in which the winding-up has been conducted and the property of the Company disposed of and of hearing any explanation that may be given by the Liquidator and also of determining by a special resolution of the Company, the manner in which the books, accounts and documents of the Company and of the Liquidator shall be disposed of.

Dated this 23rd day of April, 2005, at Madurai.

for ULTRA BUSINESS MACHINES PVT LTD,
LIQUIDATOR.

**ಅಲ್ಟ್ರಾ ಬಿಸಿನೆಸ್ ಮೆಷಿನ್ಸ್ ಪ್ರೈವೇಟ್ ಲಿಮಿಟೆಡ್**
**(ಪರಿಸಮಾಪ್ತಿಯಲ್ಲಿದೆ, ಕಂಪನಿಯ ಲೇಣೆದಾರರಿಂದ ಸ್ವಯಂ ಪ್ರೇರಣೆಯಿಂದ ಮುಚ್ಚಲಾಗುತ್ತಿದೆ)**
**ನೋಂದಾಯಿತ ಕಛೇರಿ: ನಂ.11/1 ಮತ್ತು 11/5, ಹಳೆ ಮಾರ್ಕೆಟ್ ರಸ್ತೆ, ವಿಶ್ವೇಶ್ವರಪುರಂ, ಬೆಂಗಳೂರು 560 004.**
**ಫಾರಂ ನಂ.155 (ನಿಯಮ 329 ನೋಡಿ)**
**ಲೇಣೆದಾರರಿಂದ ಸ್ವಯಂ ಪ್ರೇರಣೆಯಿಂದ ಮುಚ್ಚುವಿಕೆ.**
**ಕಂಪನಿಯ ಹೆಸರು: ಅಲ್ಟ್ರಾ ಬಿಸಿನೆಸ್ ಮೆಷಿನ್ಸ್ ಪ್ರೈವೇಟ್ ಲಿಮಿಟೆಡ್**
**ಅಂತಿಮ ಸಭೆ ನಡೆಸುವ ಬಗ್ಗೆ ನೋಟೀಸ್**

ಪ್ರಕರಣ 509ರ ಅನ್ವಯ ಈ ಮೂಲಕ ಸೂಚಿಸುವುದೇನೆಂದರೆ, ಕಂಪನಿಯನ್ನು ಯಾವ ಕಾರಣಕ್ಕಾಗಿ ಹೇಗೆ ಮುಚ್ಚಲಾಯಿತು ಮತ್ತು ಕಂಪನಿಯ ಸ್ವತ್ತನ್ನು ಹೇಗೆ ವಿಲೇವಾರಿ ಮಾಡಲಾಯಿತು ಎಂಬುದನ್ನು ತಿಳಿಸುವ ಲೆಕ್ಕಪತ್ರವನ್ನು ಮುಂದಿಡುವುದು ಮತ್ತು ಲಿಕ್ವಿಡೇಟರ್‌ರವರು ನೀಡಬಹುದಾದ ಯಾವುದೇ ಸಮಜಾಯಿಷಿಯನ್ನು ಆಲಿಸಲು ಹಾಗೂ ಕಂಪನಿಯ ಮತ್ತು ಲಿಕ್ವಿಡೇಟರ್‌ರವರ ಪುಸ್ತಕಗಳು, ಲೆಕ್ಕಪತ್ರಗಳು ಮತ್ತು ದಾಖಲೆಗಳನ್ನು ಯಾವ ರೀತಿಯಲ್ಲಿ ವಿಲೇವಾರಿ ಮಾಡುವುದು ಎಂಬುದರ ಬಗ್ಗೆ ಕಂಪನಿಯ ವಿಶೇಷ ನಿರ್ಣಯದ ಮೂಲಕ ನಿರ್ಧರಿಸುವ ಉದ್ದೇಶಕ್ಕಾಗಿ ಮೇಲಿನ ಕಂಪನಿಯ ಲೇಣೆದಾರರುಗಳ ಮಹಾ ಸಭೆಯನ್ನು ದಿನಾಂಕ 13ನೇ ಜೂನ್ 2005ರ ಸೋಮವಾರದಂದು ಬೆಳಿಗ್ಗೆ 10 ಗಂಟೆಗೆ 11/1 ಮತ್ತು 11/5, ಹಳೆ ಮಾರ್ಕೆಟ್ ರಸ್ತೆ, ವಿಶ್ವೇಶ್ವರಪುರಂ, ಬೆಂಗಳೂರು 560004 ಇಲ್ಲಿ ನಡೆಸಲಾಗುವುದು.

ದಿನಾಂಕ: 23ನೇ ಏಪ್ರಿಲ್, 2005 ಸ್ಥಳ: ಮಧುರೈ.

**ಜಿ. ರಾಮ್**
ಅಲ್ಟ್ರಾ ಬಿಸಿನೆಸ್ ಮೆಷಿನ್ ಪ್ರೈವೇಟ್ ಲಿಮಿಟೆಡ್,
ಪರವಾಗಿ ಲಿಕ್ವಿಡೇಟರ್.

**ಅಲ್ಟ್ರಾ ಬಿಸಿನೆಸ್ ಮೆಷಿನ್ಸ್ ಪ್ರೈವೇಟ್ ಲಿಮಿಟೆಡ್**
**(ಪರಿಸಮಾಪ್ತಿಯಲ್ಲಿದೆ, ಕಂಪನಿಯ ಲೇಣೆದಾರರಿಂದ ಸ್ವಯಂ ಪ್ರೇರಣೆಯಿಂದ ಮುಚ್ಚಲಾಗುತ್ತಿದೆ)**
**ನೋಂದಾಯಿತ ಕಛೇರಿ: ನಂ.11/1 ಮತ್ತು 11/5, ಹಳೆ ಮಾರ್ಕೆಟ್ ರಸ್ತೆ, ವಿಶ್ವೇಶ್ವರಪುರಂ, ಬೆಂಗಳೂರು 560 004.**
**ಫಾರಂ ನಂ.155 (ನಿಯಮ 329 ನೋಡಿ)**
**ಲೇಣೆದಾರರಿಂದ ಸ್ವಯಂ ಪ್ರೇರಣೆಯಿಂದ ಮುಚ್ಚುವಿಕೆ.**
**ಕಂಪನಿಯ ಹೆಸರು: ಅಲ್ಟ್ರಾ ಬಿಸಿನೆಸ್ ಮೆಷಿನ್ಸ್ ಪ್ರೈವೇಟ್ ಲಿಮಿಟೆಡ್**
**ಅಂತಿಮ ಸಭೆ ನಡೆಸುವ ಬಗ್ಗೆ ನೋಟೀಸ್**

ಪ್ರಕರಣ 509ರ ಅನ್ವಯ ಈ ಮೂಲಕ ಸೂಚಿಸುವುದೇನೆಂದರೆ, ಕಂಪನಿಯನ್ನು ಯಾವ ಕಾರಣಕ್ಕಾಗಿ ಹೇಗೆ ಮುಚ್ಚಲಾಯಿತು ಮತ್ತು ಕಂಪನಿಯ ಸ್ವತ್ತನ್ನು ಹೇಗೆ ವಿಲೇವಾರಿ ಮಾಡಲಾಯಿತು ಎಂಬುದನ್ನು ತಿಳಿಸುವ ಲೆಕ್ಕಪತ್ರವನ್ನು ಮುಂದಿಡುವುದು ಮತ್ತು ಲಿಕ್ವಿಡೇಟರ್‌ರವರು ನೀಡಬಹುದಾದ ಯಾವುದೇ ಸಮಜಾಯಿಷಿಯನ್ನು ಆಲಿಸಲು ಹಾಗೂ ಕಂಪನಿಯ ಮತ್ತು ಲಿಕ್ವಿಡೇಟರ್‌ರವರ ಪುಸ್ತಕಗಳು, ಲೆಕ್ಕಪತ್ರಗಳು ಮತ್ತು ದಾಖಲೆಗಳನ್ನು ಯಾವ ರೀತಿಯಲ್ಲಿ ವಿಲೇವಾರಿ ಮಾಡುವುದು ಎಂಬುದರ ಬಗ್ಗೆ ಕಂಪನಿಯ ವಿಶೇಷ ನಿರ್ಣಯದ ಮೂಲಕ ನಿರ್ಧರಿಸುವ ಉದ್ದೇಶಕ್ಕಾಗಿ ಮೇಲಿನ ಕಂಪನಿಯ ಸದಸ್ಯರುಗಳ ಮಹಾ ಸಭೆಯನ್ನು ದಿನಾಂಕ 13ನೇ ಜೂನ್ 2005ರ ಸೋಮವಾರದಂದು ಬೆಳಿಗ್ಗೆ 11 ಗಂಟೆಗೆ 11/1 ಮತ್ತು 11/5, ಹಳೆ ಮಾರ್ಕೆಟ್ ರಸ್ತೆ, ವಿಶ್ವೇಶ್ವರಪುರಂ, ಬೆಂಗಳೂರು 560004 ಇಲ್ಲಿ ನಡೆಸಲಾಗುವುದು.

ದಿನಾಂಕ: 23ನೇ ಏಪ್ರಿಲ್, 2005 ಸ್ಥಳ: ಮಧುರೈ.

**ಜಿ. ರಾಮ್**
ಅಲ್ಟ್ರಾ ಬಿಸಿನೆಸ್ ಮೆಷಿನ್ ಪ್ರೈವೇಟ್ ಲಿಮಿಟೆಡ್,
ಪರವಾಗಿ ಲಿಕ್ವಿಡೇಟರ್.

ಪಿ.ಡಿ.33